16. Written test will be conducted for the candidates who are qualified for selection.

17. Selection of the candidates will be made on the basis of written test and viva-voce test.

18. Intimation for the viva-voce test will be sent in the ratio of 1:5 on the basis of merit in the qualifying written test.

19. Applicants when called for written test/ viva-voce test shall appear at their own expenses.

20. If the candidate does not get the intimation for written test/ viva-voce test, it may be presumed that he/ she is not eligible for written test/ viva-voce test. No correspondence will be entertained thereafter with the candidates who have not been called for the written test/ viva-voce test.

By Order of the High Court,

**K.SOMASHEKAR**

REGISTRAR (VIGILANCE).

## ANNEXURE – I

## APPLICATION FORM

**APPLICATION FOR RECRUITMENT TO THE POSTS OF SOFTWARE TECHNICIAN ON CONTRACT BASIS IN THE SUB-ORDINATE DISTRICT COURTS IN THE STATE.**

To

The Registrar General,
High Court of Karnataka,
Bangalore.

| | | |
|---|---|---|
| 1. | Name of the candidate in full (in block letters) | |
| 2. | Name of his/her father/ mother/ husband | |
| 3. | Age and date of birth | |
| 4. | Postal address (in block letters) | |
| 5. | Occupation of Parents/ Guardian/ Husband. | |
| 6. | Qualification:<br>a) Prescribed<br>b) other<br>c) experience<br>(to be supported by Certificate) | |
| 7. | Whether the applicant is an Indian Citizen, if not what is his/ her Nationality (enclose relevant certificate) | |

1. I hereby solemnly declare that the information and particulars given above are true to the best of my knowledge and belief.
2. I am ready to work anywhere in the State, if selected.

Place:

Date: Signature of the Candidate.

**ANNEXURE - II**

**Rule 15: Provision for appointment of retired Government Servants and for appointment by contract:**

(1) Notwithstanding anything contained in these Rules or in the rules of recruitment specially made in respect of any service or post, the Government may, if it considers necessary for reasons to be recorded in writing, that it is in public interest so to do – - -

(b) appoint to the following categories of posts any person who in its opinion is able to discharge the duties of such post on such terms and conditions as may be determined by agreement, for a period not exceeding one year at a time, -

(ii) posts requiring technical qualifications


# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಜೂನ್ ೨೯, ೨೦೧೨ (ಆಷಾಢ ೮, ಶಕ ವರ್ಷ ೧೯೩೪) | ನಂ. ೪೩೮ |
|---|---|---|


## KARNATAKA ELECTRICITY REGULATORY COMMISSION

No 9/2, 6th & 7th Floors, Mahalaxmi Chambers, M.G. Road, Bangalore-560 001

**NOTIFICATION**

**No. Y/01/12, Bangalore, dated 27.06. 2012**

**Preamble:**

KERC vide its notification dated 29.03.2012, as an interim measure, had notified the pooled cost of power purchase under Clause 7(c) of the KERC (Procurement of Energy From Renewable Sources)(First Amendment) Regulations, 2011at Rs. 2.73/unit till 30th June 2012 or further notification, whichever is earlier. Meanwhile, the ESCOMs have furnished the details of power purchase quantum and costs for FY12. Based on the information the pooled cost works out to Rs.2.60/unit.

**ORDER**

**In exercise of the powers conferred under Clause 7 (c) of the KERC (Procurement of Energy from Renewable Sources) (First Amendment) Regulations, 2011, for the purpose of Renewable Energy Certificate (REC), the Karnataka Electricity Regulatory Commission hereby notifies the pooled cost at Rs. 2.60/unit from 01.04.2012 to 31.03.2013. As specified in the notification-dated 29.03.2012, the variation in the pooled cost of 13 paise/unit shall be adjusted in the future bills in three equal installments by ESCOMs.**

**Approved by the Commission**

**Secretary**
Karnataka Electricity Regulatory Commission
Bangalore

ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಶುಕ್ರವಾರ, ಜೂನ್ ೨೯, ೨೦೧೨ (ಆಷಾಢ ೮, ಶಕ ವರ್ಷ ೧೯೩೪) | ನಂ. ೪೩೯ |
|---|---|---|

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಸಿಆಸುಇ 2 ಸೆಹಿಮ 2012, ಬೆಂಗಳೂರು, ದಿನಾಂಕ: 28.6.2012**

**ವಿಷಯ:** ಸರ್ಕಾರದ ವಿವಿಧ ಇಲಾಖೆಗಳು ಹಾಗೂ ಅವುಗಳ ಅಧೀನದಲ್ಲಿ ಬರುವ ವಿವಿಧ ನಿಗಮ/ ಮಂಡಳಿ/ ಪ್ರಾಧಿಕಾರ/ಸಂಸ್ಥೆಗಳಲ್ಲಿ ಬಾಕಿ ಇರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದ ಬ್ಯಾಕ್‌ಲಾಗ್‌ನ್ನು ಭರ್ತಿಮಾಡುವ ಬಗ್ಗೆ.

ರಾಜ್ಯ ಸರ್ಕಾರದ ವಿವಿಧ ಇಲಾಖೆಗಳಲ್ಲಿ ದಿನಾಂಕ 1.1.1984ರಿಂದ ದಿನಾಂಕ 12.7.1989ರವರೆಗೆ ನಡೆದ ನೇರ ನೇಮಕಾತಿಗಳಲ್ಲಿ ಅರ್ಹ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ಲಭ್ಯವಿಲ್ಲದೇ ಇತರೆಯವರಿಂದ ಭರ್ತಿ ಮಾಡಿದ್ದಲ್ಲಿ ಅಂತಹವುಗಳನ್ನು ಗುರುತಿಸಿ ಬ್ಯಾಕ್‌ಲಾಗ್ ಎಂದು ಪರಿಗಣಿಸಿ ಭರ್ತಿ ಮಾಡುವಂತೆ ದಿನಾಂಕ 12.7.1989ರ ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 19 ಎಸ್‌ಬಿಸಿ 89ರ ಆದೇಶವನ್ನು ದಿನಾಂಕ 22.7.1989ರ ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 19 ಎಸ್‌ಬಿಸಿ 89ರೊಂದಿಗೆ ಓದಿಕೊಂಡಂತೆ, ಇವುಗಳನ್ವಯ ಸೂಚಿಸಲಾಗಿದೆ. ದಿನಾಂಕ 12.7.1989ರ ನಂತರ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಭ್ಯರ್ಥಿಗಳಿಗಾಗಿ ಗುರುತಿಸಿದ ರಿಕ್ತ ಸ್ಥಾನಗಳನ್ನು ಇತರೆಯವರಿಂದ ಭರ್ತಿ ಮಾಡುವುದನ್ನು ದಿನಾಂಕ 12.7.1989ರ ಮೇಲ್ಕಂಡ ಆದೇಶದಲ್ಲಿ ನಿಷೇಧಿಸಲಾಗಿರುತ್ತದೆ. ಅದರಂತೆ ನೇರ ನೇಮಕಾತಿಯ ಸಂದರ್ಭದಲ್ಲಿ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗಾಗಿ ಮೀಸಲಿರಿಸಿದ ರಿಕ್ತ ಸ್ಥಾನಗಳನ್ನು ತುಂಬಲು ಆ ವರ್ಗಗಳಿಗೆ ಸೇರಿದ ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲದೇ ಇದ್ದಲ್ಲಿ, ಅಂತಹ ರಿಕ್ತ ಸ್ಥಾನ ಗಳನ್ನು ಮುಂದಕ್ಕೊಯ್ಯಬೇಕಾಗಿದ್ದು, ಅದು ನೇರ ನೇಮಕಾತಿಯಲ್ಲಿ ಬ್ಯಾಕ್‌ಲಾಗ್ ಆಗುತ್ತದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ನೇರ ನೇಮಕಾತಿ ಬ್ಯಾಕ್‌ಲಾಗನ್ನು ಭರ್ತಿ ಮಾಡಲು The Karnataka State Civil Services (Unfilled vacancies reserved for the persons belonging to the Scheduled Castes / Scheduled Tribes) (Special Recruitment) Rules, 2001ನ್ನು ರಚಿಸಲಾಗಿದ್ದು, ಈ ನಿಯಮಗಳು ದಿನಾಂಕ 22.11.2001ರಿಂದ ಜಾರಿಗೆ ಬಂದಿರುತ್ತವೆ.

2. ಮೀಸಲಾತಿ ಅನ್ವಯವಾಗುವ ವೃಂದಗಳಿಗೆ ಮುಂಬಡ್ತಿ ನೀಡುವಾಗ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ರೋಸ್ಟರ್ ಬಿಂದುವಿನ ಎದುರಾಗಿ ಲಭ್ಯವಾಗದೇ ಸಾಮಾನ್ಯ ಅಭ್ಯರ್ಥಿಗಳಿಂದ ಭರ್ತಿ ಮಾಡಿದ್ದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ ಮೀಸಲಾದ ಮತ್ತು ನಷ್ಟಗೊಂಡ ಅಂತಹ ರಿಕ್ತ ಸ್ಥಾನಗಳನ್ನು ಬ್ಯಾಕ್‌ಲಾಗ್ ಎಂದು ಪರಿಗಣಿಸಿ ಅಂತಹ ಬ್ಯಾಕ್‌ಲಾಗ್ ಅನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದ ಅಭ್ಯರ್ಥಿಗಳಿಂದ ಭರ್ತಿ ಮಾಡಬೇಕೆಂದು ದಿನಾಂಕ 1.4.1992ರ ಅಧಿಸೂಚನೆ ಸಂಖ್ಯೆ: ಸಿಆಸುಇ 13 ಎಸ್‌ಆರ್‌ಆರ್ 92ರಲ್ಲಿ ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 8ಕ್ಕೆ ಪರಂತುಕವನ್ನು ಸೇರಿಸಿ ತಿದ್ದುಪಡಿ ಮಾಡಿ ಜಾರಿಗೆ ತರಲಾಗಿದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಮುಂಬಡ್ತಿ ಬ್ಯಾಕ್‌ಲಾಗನ್ನು ಭರ್ತಿ ಮಾಡಲು ದಿನಾಂಕ 24.6.1997ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 10 ಸೆಹಿಮ 97ರಲ್ಲಿ ಮಾರ್ಗಸೂಚನೆಗಳನ್ನು ನೀಡಲಾಗಿರುತ್ತದೆ.

3. ದಿನಾಂಕ 25.5.2012ರಂದು ಜರುಗಿದ ಕರ್ನಾಟಕ ವಿಧಾನ ಮಂಡಲದ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಕಲ್ಯಾಣ ಸಮಿತಿ ಸಭೆಯಲ್ಲಿ ಸರ್ಕಾರದ ವಿವಿಧ ಇಲಾಖೆಗಳಲ್ಲಿ ಹಾಗೂ ಅವುಗಳ ಅಧೀನದಲ್ಲಿ ಬರುವ ವಿವಿಧ ನಿಗಮ / ಮಂಡಳಿ / ಪ್ರಾಧಿಕಾರ / ಸಂಸ್ಥೆಗಳಲ್ಲಿ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಕ್ಕೆ ಸೇರಿದ ನೇರ ನೇಮಕಾತಿ ಮತ್ತು ಮುಂಬಡ್ತಿ ಬ್ಯಾಕ್‌ಲಾಗನ್ನು ಭರ್ತಿ ಮಾಡದಿರುವ ಬಗ್ಗೆ ಅವಲೋಕಿಸಿ, ವಿಷಯವನ್ನು ತೀವ್ರವಾಗಿ ಪರಿಗಣಿಸಿ ಬಾಕಿ ಇರುವ ಬ್ಯಾಕ್‌ಲಾಗನ್ನು 3 ತಿಂಗಳೊಳಗಾಗಿ ತಪ್ಪದೇ ಭರ್ತಿ ಮಾಡುವಂತೆ ಸೂಚಿಸಿರುತ್ತದೆ.

4. ಮೇಲ್ಕಂಡ ಹಿನ್ನೆಲೆಯಲ್ಲಿ, ಸರ್ಕಾರದ ವಿವಿಧ ಇಲಾಖೆಗಳು ಹಾಗೂ ಅವುಗಳ ಅಧೀನದಲ್ಲಿ ಬರುವ ವಿವಿಧ ನಿಗಮ / ಮಂಡಳಿ / ಪ್ರಾಧಿಕಾರ / ಸಂಸ್ಥೆಗಳು ಬಾಕಿ ಇರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ನೇರ ನೇಮಕಾತಿ ಮತ್ತು ಮುಂಬಡ್ತಿ ಬ್ಯಾಕ್‌ಲಾಗನ್ನು ಮೂರು ತಿಂಗಳೊಳಗೆ ಕಡ್ಡಾಯವಾಗಿ ಭರ್ತಿ ಮಾಡುವಂತೆ ಮತ್ತು ಅನುಸರಣಾ ವರದಿಯನ್ನು ಸಚಿವಾಲಯದ ಸಂಬಂಧಿಸಿದ ಆಡಳಿತ ಇಲಾಖೆಗಳ ಮುಖಾಂತರ ಕರ್ನಾಟಕ ವಿಧಾನ ಮಂಡಲದ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಕಲ್ಯಾಣ ಸಮಿತಿಗೆ ಸಲ್ಲಿಸುವಂತೆ ಎಲ್ಲಾ ನೇಮಕಾತಿ ಪ್ರಾಧಿಕಾರಗಳಿಗೆ ಹಾಗೂ ಸಂಬಂಧಿತರಿಗೆ ಸೂಚಿಸಲಾಗಿದೆ.

**ಮೊಹಮ್ಮದ್ ಸನಾವುಲ್ಲ**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಜೂನ್ ೨೯, ೨೦೧೨ (ಆಷಾಢ ೮, ಶಕ ವರ್ಷ ೧೯೩೪) | ನಂ. ೪೪೦ |
|---|---|---|

## PERSONNEL AND ADMINISTRATIVE REFORMS SECRETARIAT

## NOTIFICATION

**No. DPAR 54 SRR 2012, Bangalore, Dated: 23.6.2012**

In exercise of the powers conferred by section 32 of the Persons with Disabilities (Equal Opportunities, Protection of Rights and Full Participation) Act, 1995(Central Act 1 of 1996), the Government of Karnataka hereby makes the following amendments to the Schedule to the Notification No. DPAR 52 SRR 99, dated: 29th November, 2002, published in the Karnataka Gazette extraordinary at 13th December, 2002, with immediate effect, namely:-

(i) in the entries relating to "Disabled Welfare" Department at Sl.No. 22, the following entries shall be inserted in the respective columns at the end, namely:-

| Sl. No. | Name of the Dept. | Blind | Low Vision | Leprosy cured | Hearing impaired | Locomotor disability | Mentally ill | Mentally retarded |
|---|---|---|---|---|---|---|---|---|
| | | Graduate Assistant/Non Graduate Assistant Teachers in Blind/ Deaf School<br><br>Proof Reader | Graduate Assistant/Non Graduate Assistant Teachers in Blind/ Deaf School<br><br>Group-D | Graduate Assistant/Non Graduate Assistant Teachers in Blind/ Deaf School<br><br>Group-D | Graduate Assistant/Non Graduate Assistant Teachers in Blind/ Deaf School<br><br>Group-D | Graduate Assistant/ Non Graduate Assistant Teachers in Blind/ Deaf School | Group-D | |

(ii) in the entries relating to "Home Guard and Civil Defence" Department at Sl.No.41 the following entries shall be inserted in the respective columns at the end, namely:-

| | | | | | | | | |
|---|---|---|---|---|---|---|---|---|
| | | FDA<br>SDA | FDA<br>SDA | FDA<br>Typist<br>Stenographer | Typist | Typist | | |

(iii) in the entries relating to "Horticulture" Department at Sl.No.42, the following entries shall be inserted in the respective columns at the end, namely:-

| | | | | | | | | |
|---|---|---|---|---|---|---|---|---|
| | | Horticultural Asst.<br>FDA, SDA, Gardner, Peon, Watchman | Horticultural Asst.<br>FDA, SDA, Watchman | Horticultural Asst.<br>Stenographer, Typist, Gardner, Peon, Watchman, Lab Attender | Horticultural Asst.<br>Stenographer, Typist, Gardner, Peon, Watchman, | Typist<br>Stenographer, Peon | Steno-grapher, Typist, Peon | |

(iv) in the entries relating to "Revenue" Department at Sl.No.76, the following entries shall be inserted in the respective columns at the end, namely:-

| | | | | | | | | |
|---|---|---|---|---|---|---|---|---|
| | | | | Village Accountant | Village Accountant | Village Accountant | Village Accountant | |

(v) in the entries relating to "Secretariat" at Sl.No.79, the following entries shall be inserted in the respective columns at the end, namely:-

| | | | | | | | | |
|---|---|---|---|---|---|---|---|---|
| | | Jr.Asst. | Jr.Asst. | Typist<br>Steno-grapher | Typist | Jr.Asst.<br>Typist<br>Steno-grapher | | |

(vi) in the entries relating to "Women and Child Department (formerly Social Welfare Department)" at Sl.No.98, the following entries shall be inserted in the respective columns at the end, namely:-

| | | | | | | | | |
|---|---|---|---|---|---|---|---|---|
| | | Probation Officer Grade-2, Supervisor | Probation Officer Grade-2, Supervisor | | Supervisor | Supervisor | Supervisor | |

By Order and in the name of the Governor of Karnataka,

**Dr. Mangala G.S.**
Under Secretary to Government,
Department of Personnel
Administrative Reforms (Service Rules-1)

# ವಿಶೇಷ ಪತ್ರಿಕೆ


| ಭಾಗ – IV-A | ಬೆಂಗಳೂರು, ಶನಿವಾರ, ಜೂನ್ ೩೦, ೨೦೧೨ (ಆಷಾಢ ೯, ಶಕ ವರ್ಷ ೧೯೩೪) | ನಂ. ೪೪೫ |
|---|---|---|


## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 15 ಸೇಇವಿ 2011, ಬೆಂಗಳೂರು, ದಿನಾಂಕ: 30.06.2012**

ಕರ್ನಾಟಕ ರಾಜ್ಯ ನಾಗರಿಕ ಸೇವೆಗಳ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14) ರ ನಿಯಮ 8ರೊಂದಿಗೆ ಓದಲಾದ ನಿಯಮ 3ರ ಉಪನಿಯಮ (1) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ)ನಿಯಮಗಳು, 1957ಕ್ಕೆ ತಿದ್ದುಪಡಿ ಮಾಡಲು ಉದ್ದೇಶಿಸಿ ಮೇಲೆ ಹೇಳಿದ ಅಧಿನಿಯಮ 3ರ ಉಪನಿಯಮ 2ರ ಕಲಂ(ಎ)ನಲ್ಲಿ ಅಗತ್ಯಪಡಿಸಲಾದಂತೆ ಅದರಿಂದ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದೆ ಮತ್ತು ಸದರಿ ಕರಡನ್ನು ಅದು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳ ತರುವಾಯ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಈ ಕರಡು ಅಧಿಸೂಚನೆಗೆ ಸಂಬಂಧಿಸಿದಂತೆ, ಮೇಲೆ ನಿಗಧಿಪಡಿಸಿದ ಅವಧಿಯು ಮುಕ್ತಾಯವಾಗುವುದಕ್ಕೆ ಮೊದಲು ಯಾರೇ ವ್ಯಕ್ತಿಯಿಂದ ಸ್ವೀಕರಿಸಬಹುದಾದ ಯಾವುದೇ ಆಕ್ಷೇಪಣೆ ಮತ್ತು ಸಲಹೆಯನ್ನು ರಾಜ್ಯ ಸರ್ಕಾರವು ಪರಿಗಣಿಸುವುದು. ಆಕ್ಷೇಪಣೆಗಳು ಹಾಗೂ ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ವಿಧಾನಸೌಧ, ಬೆಂಗಳೂರು–560001 ಇವರಿಗೆ ಸಲ್ಲಿಸಬಹುದು.

### ಕರಡು ನಿಯಮಗಳು

**1. ಹೆಸರು ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ)(ತಿದ್ದುಪಡಿ) ನಿಯಮಗಳು, 2012 ಎಂದು ಕರೆಯತಕ್ಕದ್ದು.

(2) ಈ ನಿಯಮವು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ನಿಯಮ 15 ಕ್ಕೆ ತಿದ್ದುಪಡಿ:–** ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 15 ರ

(i) ಉಪನಿಯಮ (2ಬಿ)ರ ಖಂಡ (i) ರ ನಂತರ ಕೆಳಕಂಡ ಪರಂತುಕವನ್ನು ಪ್ರತಿಸ್ಥಾಪಿಸತಕ್ಕದ್ದು, ಅಂದರೆ:–

"ಪರಂತು, ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಇವರು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ನಿಯೋಜನೆಯ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಗುಂಪು 'ಬಿ' ಗುಂಪು 'ಸಿ' ಅಥವಾ ಗುಂಪು 'ಡಿ' ವೃಂದದ ನೌಕರರ ಪ್ರಕರಣಗಳಿಗೆ ಸಂಬಂಧಿಸಿದಂತೆ ಇನ್ನು ಮುಂದೆ ನೇಮಕಾತಿ ಪ್ರಾಧಿಕಾರದ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು

(ii) ಉಪನಿಯಮ(3)ರ ಪರಂತುಕದಡಿ ಇರುವ ಉಪ ಖಂಡ (i) ರಲ್ಲಿ ರ ಉಪನಿಯಮ (2ಎ) ರ ಖಂಡ (ii) ರ ಉಪಖಂಡ (ಎ) ಅಥವಾ ಎಂಬ ಪದಗಳ ನಂತರ "ಖಂಡ (i) ರಡಿಯಿರುವ ಪರಂತುಕ ಮತ್ತು" ಎಂಬ ಪದಗಳನ್ನು ಪ್ರತಿಸ್ಥಾಪಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ॥ ಮಂಗಳ.ಜಿ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

## PERSONNEL AND ADMINISTRATIVE REFORMS SECRETARIAT

## NOTIFICATION

### No. DPAR 15 SDE 2011, Bangalore, dated: 30.06.2012

The draft of the following rules further to amend the Karnataka Civil Services(Classification, Control and Appeal) Rules, 1957, which the Government of Karnataka proposes to make in exercise of the powers conferred by sub-section(1) of section 3 read with section 8 Of the Karnataka State Civil Services Act, 1978 (Karnataka Act 14 of 1990)is hereby published as required by clause (a)of sub-section(2)of section 3 of the said Act for the information of persons likely to be affected thereby and notice is hereby given that the said draft will be taken into consideration after fifteen days from the date of its publication in Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Department of personnel and Administrative Reforms, Vidhana Soudha, Bangalore -560001.

### DRAFT RULES

**1. Short title and commencement**:- (1) These rules may be called the Karnataka Civil Services (Classification, Control and Appeal) (Amendment) Rules, 2012.

(2) They shall come into force from the date of their publication in the official Gazette.

**2. Amendment of Rule 15:-** In the Karnataka Civil Services (Classification, Control and Appeal) Rules, 1957, in rule 15,

(i) in sub -rule (2B),after clause (i), the following proviso shall be inserted, namely:-

"Provided that the commissioner, Bruhath Bangaluru Mahanagara Palike in respect of a Government Servant holding a Group 'B', Group 'C' or Group 'D' post whose service are lint to the Bruhath Bangaluru Mahanagara Palike shall perform the functions of the appointing authority"

(ii) in sub-rule(3),in the proviso, in clause(i), after the words "sub-clause (a) of clause (ii) of sub-rule (2A) or" the words "in the proviso to clause(i) and" shall be inserted.

By Order and in the name of the Governor of Karnataka,

**Dr. Mangala.G.S.**
Under Secretary to Government,
Department of Personnel and Administrative Reforms
(Service Rules-1).

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಮಂಗಳವಾರ, ಜುಲೈ ೩, ೨೦೧೨ (ಆಷಾಢ ೧೨, ಶಕ ವರ್ಷ ೧೯೩೪) | ನಂ. ೪೪೬ |
|---|---|---|


## ಕರ್ನಾಟಕ ಸರ್ಕಾರದ ನಡವಳಿಗಳು

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಬೆಳಗಾವಿ ಮಹಾನಗರಪಾಲಿಕೆಯನ್ನು ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಕಲಂ 99ರ ಪ್ರಕಾರ ವಿಸರ್ಜಿಸುವ ಬಗ್ಗೆ

**ಓದಲಾಗಿದೆ:**

1) ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ನಅಇ 174 ಎಸಿಬಿ 2009, ದಿನಾಂಕ 3/12/2009.
2) ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ನಅಇ 174 ಎಸಿಬಿ 2009, ದಿನಾಂಕ 23/11/2010.
3) ಆಯುಕ್ತರು, ಬೆಳಗಾವಿ ಮಹಾನಗರಪಾಲಿಕೆ ಇವರ ಪತ್ರ ಸಂಖ್ಯೆ: ಮನಬೆ:ಪಕಾಪ ಸಭೆ:ಕಾಕೇನೋ: ವಿವ:2010–11, ದಿನಾಂಕ 23/11/2010.
4) ಮಹಾಪೌರರು, ಬೆಳಗಾವಿ ಮಹಾನಗರಪಾಲಿಕೆ ಇವರ ಟಿಪ್ಪಣಿ ಸಂಖ್ಯೆ: ಮಪೌ:ಆಪ್ತ.ಸ:ಕಾಕೇನೋ: ವಿವ:2010–11, ದಿನಾಂಕ 23/11/2010.
5) ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ, ಬೆಳಗಾವಿ ಇವರ ಪತ್ರ ಸಂಖ್ಯೆ: ಬಿಜಿಎಂ:ಡಿಯುಡಿಸಿ:5: ಸದಿಆರ್:55:2011–12/518, ದಿನಾಂಕ 18/7/2011.
6) ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ಪತ್ರ ಸಂಖ್ಯೆ: ಪ್ರಾಆಬೆ: ಎಂಯುಎನ್.:40/11–12, ದಿನಾಂಕ 19/7/2011.
7) ಬೆಳಗಾವಿ ಮಹಾನಗರಪಾಲಿಕೆಯ ವಿಶೇಷ ಸಾಮಾನ್ಯ ಸಭೆಯ ದಿನಾಂಕ 28/6/2011ರ ನಡವಳಿ.
8) ಆಯುಕ್ತರು, ಬೆಳಗಾವಿ ಮಹಾನಗರಪಾಲಿಕೆ ಇವರ ಪತ್ರ ಸಂಖ್ಯೆ: ಮನಬೆ/ಮುಲೆಅ/ ಆಯವ್ಯಯ/2011–12/232, ದಿನಾಂಕ 13/7/2011.
9) ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ನಅಇ 239 ಎಸಿಬಿ 2011, ದಿನಾಂಕ 24/11/2011.
10) ಆಯುಕ್ತರು, ಬೆಳಗಾವಿ ಮಹಾನಗರಪಾಲಿಕೆ ಇವರ ಪತ್ರ ಸಂಖ್ಯೆ: ಮನಬೆ/ಪಕಾ/ಪ.ಸಭೆ/ವಿವ/ 2011–12, ದಿನಾಂಕ 29/10/2011.
11) ಮಹಾಪೌರರು, ಬೆಳಗಾವಿ ಮಹಾನಗರಪಾಲಿಕೆ ಇವರ ಪತ್ರ ದಿನಾಂಕ 7/12/2011.
12) ಸರ್ಕಾರದ ಆದೇಶ ಸಂಖ್ಯೆ: ನಅಇ 239 ಎಸಿಬಿ 2011, ದಿನಾಂಕ 15/12/2011.
13) ರಿಟ್ ಅರ್ಜಿ ಸಂಖ್ಯೆ: 60201, 60416, 60448–60467 ಮತ್ತು 61454/2012ರಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶ ದಿನಾಂಕ 19/06/2012.
14) ಬೆಳಗಾವಿ ಮಹಾನಗರಪಾಲಿಕೆಯ ಸದಸ್ಯರುಗಳು ದಿನಾಂಕ 25/06/2012ರಂದು ಸಲ್ಲಿಸಿದ ಲಿಖಿತ ಮತ್ತು ಮೌಖಿಕ ಉತ್ತರಗಳು.

**ಪ್ರಸ್ತಾವನೆ:**

ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಕಲಂ 57(2) ಪ್ರಕಾರ ಸದರಿ ಅಧಿನಿಯಮದ ಮೂಲಕ ಮತ್ತು ಮೇರೆಗೆ ಅದಕ್ಕೆ ಪ್ರದತ್ತವಾದಂತಹ ಅಧಿಕಾರಗಳನ್ನು ಚಲಾಯಿಸುವುದು, ಅಂತಹ ಪ್ರಕಾರ್ಯಗಳನ್ನು ನಿರ್ವಹಿಸುವುದು ಮತ್ತು ಅಂತಹ ಕರ್ತವ್ಯಗಳನ್ನು ನಿರ್ವಹಿಸುವುದು ಮತ್ತು ಜಮೆಗಳು ಮತ್ತು ಬಟವಾಡೆಗಳಿಗೆ ಸಂಬಂಧಪಟ್ಟ ಎಲ್ಲಾ ನಿಯತಕಾಲಿಕ ವಿವರಣ ಪಟ್ಟಿಗಳು ಮತ್ತು ಎಲ್ಲಾ ಪ್ರಗತಿ ವರದಿಗಳನ್ನು ಪರ್ಯಾಲೋಚಿಸುವುದು ಮತ್ತು ಅವುಗಳ ಮೇಲೆ ತಾನು ಸೂಕ್ತ ಎಂದು ಭಾವಿಸಿದಂತಹ ನಿರ್ಣಯಗಳನ್ನು ಮಾಡುವುದು ಮಹಾನಗರಪಾಲಿಕೆಯ ಕರ್ತವ್ಯವಾಗಿರುತ್ತದೆ.

2) ಆದರೆ ಪ್ರಸಕ್ತ ಬೆಳಗಾವಿ ಮಹಾನಗರಪಾಲಿಕೆಯು ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಮೂಲಕ ಮತ್ತು ಮೇರೆಗೆ ಅದಕ್ಕೆ ಪ್ರದತ್ತವಾದಂತಹ ಅಧಿಕಾರಗಳನ್ನು ಚಲಾಯಿಸುವುದು, ಅಂತಹ ಪ್ರಕಾರ್ಯಗಳನ್ನು ನಿರ್ವಹಿಸುವುದು ಮತ್ತು ಅಂತಹ ಕರ್ತವ್ಯಗಳನ್ನು ಸಮರ್ಪಕವಾಗಿ ನಿರ್ವಹಿಸುತ್ತಿರುವುದು ಕಂಡುಬಂದಿರಲಿಲ್ಲವಾದ್ದರಿಂದ ಈ ಮುಂದಿನ ಕಂಡಿಕೆಗಳಲ್ಲಿ ಹೇಳಲಾದ ಕಾರಣಗಳಿಗಾಗಿ ಬೆಳಗಾವಿ ಮಹಾನಗರಪಾಲಿಕೆಯು

ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976 ಮತ್ತು ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನ ಮೇರೆಗೆ ಮಹಾನಗರಪಾಲಿಕೆ ಮೇಲೆ ವಿಧಿಸಿದ ಕರ್ತವ್ಯಗಳನ್ನು ಮಹಾನಗರಪಾಲಿಕೆಯು ನೆರವೇರಿಸಲು ವಿಫಲವಾಗಿದೆ ಅಥವಾ ಅಧಿಕಾರಗಳನ್ನು ಮೀರಿರುತ್ತದೆ ಅಥವಾ ದುರುಪಯೋಗಪಡಿಸಿಕೊಳ್ಳುತ್ತಿದೆ ಅಥವಾ ಮಹಾನಗರಪಾಲಿಕೆಯ ಹಿತಾಸಕ್ತಿಗೆ ಬಾಧಕವಾಗುವ ರೀತಿಯಲ್ಲಿ ಕೆಲಸಮಾಡುತ್ತಿದೆ ಎಂದು ಘೋಷಿಸಿ ಏತಕ್ಕಾಗಿ ವಿಸರ್ಜಿಸಬಾರದು ಎಂಬ ಬಗ್ಗೆ ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಕಲಂ 99(1)ರ ಮೇರೆಗೆ ಬೆಳಗಾವಿ ಮಹಾನಗರಪಾಲಿಕೆಯ ಪರಿಷತ್ತಿನ ವಿವರಣೆ ಪಡೆದು ಈ ಕಾರಣ ಕೇಳುವ ಸೂಚನಾ ಪತ್ರ ತಲುಪಿದ 15 ದಿನಗಳೊಳಗಾಗಿ ಲಿಖಿತವಾಗಿ ಸರ್ಕಾರಕ್ಕೆ ವರದಿ ಸಲ್ಲಿಸುವಂತೆ ಮೇಲೆ (9)ರಲ್ಲಿ ಓದಲಾದ ದಿನಾಂಕ 24/11/2011ರ ಕಾರಣ ಕೇಳುವ ಸೂಚನಾ ಪತ್ರವನ್ನು ಆಯುಕ್ತರು, ಬೆಳಗಾವಿ ಮಹಾನಗರಪಾಲಿಕೆ ಇವರಿಗೆ ಸೂಚಿಸಲಾಗಿತ್ತು.

3) ಕಾರಣ ಕೇಳುವ ಸೂಚನಾ ಪತ್ರದಲ್ಲಿ ಈ ಕೆಳಕಂಡ ಅಂಶಗಳು ಅಡಕಗೊಂಡಿರುತ್ತವೆ:

(i) ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಅನುಚ್ಛೇಧ–1ರ ಮಹಾನಗರಪಾಲಿಕೆ ಮತ್ತು ಸ್ಥಾಯಿ ಸಮಿತಿಗಳ ಕಾರ್ಯನಿರ್ವಹಣಾ ನಿಯಮಗಳು, 1998ರ 10ನೇ ನಿಯಮದ ಪ್ರಕಾರ ಮಹಾನಗರಪಾಲಿಕೆಯ ಸಾಮಾನ್ಯ ಸಭೆಯನ್ನು ಕನಿಷ್ಠ ಪಕ್ಷ ಪ್ರತಿ ತಿಂಗಳಿಗೆ ಒಮ್ಮೆಯಾದರೂ ನಡೆಸಬೇಕಾಗುತ್ತದೆ. ಆದರೆ ಬೆಳಗಾವಿ ಮಹಾನಗರಪಾಲಿಕೆಯು ಇದರಂತೆ ಸಭೆಗಳನ್ನು ನಡೆಸುತ್ತಿರುವುದಿಲ್ಲ.

(ii) ಈ ಸಂಬಂಧ ಈ ಹಿಂದೆ ಮಾನ್ಯ ನಗರಾಭಿವೃದ್ಧಿ, ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಸಚಿವರು ದಿನಾಂಕ 1/12/2009ರಂದು ಬೆಳಗಾವಿ ಮಹಾನಗರಪಾಲಿಕೆಯ ವಿವರವಾದ ತಪಾಸಣೆಯನ್ನು ಕೈಗೊಂಡ ಸಂದರ್ಭದಲ್ಲಿ ಮಹಾನಗರಪಾಲಿಕೆಯಲ್ಲಿ ನಿಯಮಬದ್ಧವಾಗಿ ಸಭೆಗಳನ್ನು ನಡೆಸದಿರುವುದು ಸೇರಿದಂತೆ ಹಲವಾರು ನ್ಯೂನತೆಗಳು ಕಂಡುಬಂದ ಹಿನ್ನೆಲೆಯಲ್ಲಿ ಆಯುಕ್ತರು, ಬೆಳಗಾವಿ ಮಹಾನಗರಪಾಲಿಕೆ ಇವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ 3/12/2009ರ ಕಾರಣ ಕೇಳುವ ನೋಟೀಸನ್ನು ಹೊರಡಿಸಲಾಗಿತ್ತು. ಆದರೂ ಸಹ ನಿಯಮಬದ್ಧವಾಗಿ ಮಹಾನಗರಪಾಲಿಕೆ ಸಭೆಗಳನ್ನು ನಡೆಸುವಲ್ಲಿ ಯಾವುದೇ ಸುಧಾರಣೆ ಕಂಡು ಬಂದಿರುವುದಿಲ್ಲ.

(iii) ನಂತರ ಬೆಳಗಾವಿ ಮಹಾನಗರಪಾಲಿಕೆಯ ಸಾಮಾನ್ಯ (ಪರಿಷತ್) ಸಭೆಯನ್ನು ಮಾರ್ಚ್ 2010ರ ನಂತರ ನಿಯಮಾನುಸಾರ ನಡೆಸದಿರುವ ಬಗ್ಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ 23/11/2010ರ ಕಾರಣ ಕೇಳುವ ನೋಟೀಸನ್ನು ಆಯುಕ್ತರು, ಬೆಳಗಾವಿ ಮಹಾನಗರಪಾಲಿಕೆ, ಇವರಿಗೆ ಹೊರಡಿಸಲಾಗಿತ್ತು. ಈ ಸಂಬಂಧ ಆಯುಕ್ತರು, ಮೇಲೆ (3)ರಲ್ಲಿ ಓದಲಾದ ತಮ್ಮ ದಿನಾಂಕ 23/11/2010ರ ಪತ್ರದೊಂದಿಗೆ ಸರ್ಕಾರದಿಂದ ನೀಡಲಾದ ದಿನಾಂಕ 23/11/2010ರ ಕಾರಣ ಕೇಳುವ ನೋಟೀಸಿಗೆ ಮಹಾಪೌರರು, ಬೆಳಗಾವಿ ಮಹಾನಗರಪಾಲಿಕೆ ಇವರು ಮೇಲೆ (4)ರಲ್ಲಿ ಓದಲಾದ ದಿನಾಂಕ 23/11/2010ರಂತೆ ಸಲ್ಲಿಸಿರುವ ಲಿಖಿತ ವಿವರಣೆಯನ್ನು ಲಗತ್ತಿಸಿರುತ್ತಾರೆ. ಮಹಾಪೌರರು ತಮ್ಮ ವಿವರಣೆಯಲ್ಲಿ ಪರಿಷತ್ ಸಭೆ ನಡೆಸುವಲ್ಲಿ ಆದ ವಿಳಂಬವು ಅನಿವಾರ್ಯ ಕಾರಣಗಳಿಂದ ಆಗಿದ್ದು, ಇನ್ನು ಮುಂದೆ ಪರಿಷತ್ ಸಭೆಯನ್ನು ಹಾಗೂ ಸ್ಥಾಯಿ ಸಮಿತಿಗಳ ಸಭೆಯನ್ನು ನಿಯಮಿತವಾಗಿ ನಡೆಸಲಾಗುವುದು ಎಂದು ವಿವರಣೆ ಸಲ್ಲಿಸಿರುತ್ತಾರೆ. ನಂತರವೂ ಸಹ ನಿಯಮಬದ್ಧವಾಗಿ ಮಹಾನಗರಪಾಲಿಕೆ ಸಭೆಗಳನ್ನು ನಡೆಸುವಲ್ಲಿ ಯಾವುದೇ ಸುಧಾರಣೆ ಕಂಡು ಬಂದಿರುವುದಿಲ್ಲ.

(iv) ಬೆಳಗಾವಿ ಮಹಾನಗರಪಾಲಿಕೆ ಪರಿಷತ್ ಸಭೆ ಮತ್ತು ಸ್ಥಾಯಿ ಸಮಿತಿಗಳ ಸಭೆ ನಡೆಸುವ ಕುರಿತು ಜಿಲ್ಲಾಧಿಕಾರಿಗಳು, ಬೆಳಗಾವಿ ಇವರು ಆಯುಕ್ತರು, ಬೆಳಗಾವಿ ಮಹಾನಗರಪಾಲಿಕೆ ಇವರಿಗೆ ಬರೆದಿರುವ ಮೇಲೆ (5)ರಲ್ಲಿ ಓದಲಾದ ದಿನಾಂಕ 18/07/2011ರ ಪತ್ರದಲ್ಲಿ ಸ್ಪಷ್ಟವಾದ ವಿವರಣೆ ಸಲ್ಲಿಸುವಂತೆ ಸೂಚಿಸಿದ್ದು, ಪತ್ರದ ಪ್ರತಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

(v) ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಅನುಚ್ಛೇಧ–1ರ ಮಹಾನಗರಪಾಲಿಕೆ ಮತ್ತು ಸ್ಥಾಯಿ ಸಮಿತಿಗಳ ಕಾರ್ಯನಿರ್ವಹಣಾ ನಿಯಮಗಳು, 1998ರ ನಿಯಮ 10ರ ಪ್ರಕಾರ ಸಾಮಾನ್ಯ (ಪರಿಷತ್) ಸಭೆಯನ್ನು ಕನಿಷ್ಠ ಪಕ್ಷ ಪ್ರತಿ ತಿಂಗಳು ಒಮ್ಮೆಯಾದರೂ ನಡೆಸಬೇಕಾಗುತ್ತದೆ. ಆದರೆ ಈ ಬಗ್ಗೆ ಪರಿಶೀಲಿಸಲಾಗಿ, ಈ ನಿಯಮಕ್ಕೆ ವ್ಯತಿರಿಕ್ತವಾಗಿ ಬೆಳಗಾವಿ ಮಹಾನಗರಪಾಲಿಕೆಯ ಸಾಮಾನ್ಯ (ಪರಿಷತ್) ಸಭೆಯನ್ನು ನಡೆಸುವಲ್ಲಿ ಈ ಕೆಳಕಂಡಂತೆ ಕೊರತೆ ಕಂಡು ಬಂದಿರುತ್ತದೆ:

ಅ) 2008–09ರ ಅವಧಿಯಲ್ಲಿ 12 ಸಭೆಗಳಿಗೆ ಬದಲಾಗಿ ಕೇವಲ 6 ಸಭೆಗಳನ್ನು ನಡೆಸಲಾಗಿದೆ ಮತ್ತು 6 ಸಭೆಗಳ ಕೊರತೆ ಕಂಡು ಬರುತ್ತದೆ.

ಆ) 2009–10ರ ಅವಧಿಯಲ್ಲಿ 12 ಸಭೆಗಳಿಗೆ ಬದಲಾಗಿ ಕೇವಲ 7 ಸಭೆಗಳನ್ನು ನಡೆಸಲಾಗಿದೆ ಮತ್ತು 5 ಸಭೆಗಳ ಕೊರತೆ ಕಂಡು ಬರುತ್ತದೆ.

ಇ) 2010–11ರ ಅವಧಿಯಲ್ಲಿ 12 ಸಭೆಗಳಿಗೆ ಬದಲಾಗಿ ಕೇವಲ 2 ಸಭೆಗಳನ್ನು ನಡೆಸಲಾಗಿದೆ ಮತ್ತು 10 ಸಭೆಗಳ ಕೊರತೆ ಕಂಡು ಬರುತ್ತದೆ.

ಈ) 2011–12ರ ಅವಧಿಯಲ್ಲಿ ಇದುವರೆಗೆ 8 ಸಭೆಗಳಿಗೆ ಬದಲಾಗಿ ಕೇವಲ 3 ಸಭೆಗಳನ್ನು ನಡೆಸಲಾಗಿದೆ ಮತ್ತು 5 ಸಭೆಗಳ ಕೊರತೆ ಕಂಡು ಬರುತ್ತದೆ.

(vi) ಮೇಲಿನಂತೆ ಇಲ್ಲಿಯವರೆಗೆ ಒಟ್ಟು 44 ಪರಿಷತ್ ಸಭೆಗಳನ್ನು ಜರುಗಿಸಬೇಕಾಗಿದ್ದು, ಅದರಲ್ಲಿ ಮುಂದೂಡಲ್ಪಟ್ಟ ಸಭೆಗಳನ್ನು ಹೊರತುಪಡಿಸಿ ಒಟ್ಟು 18 ಪರಿಷತ್ ಸಭೆಗಳನ್ನು ಜರುಗಿಸಿದ್ದು, ಉಳಿದ 26 ಸಭೆಗಳ ಕೊರತೆ ಕಂಡು ಬರುತ್ತದೆ. ಇದರಿಂದಾಗಿ ಮಹಾನಗರಪಾಲಿಕೆಯು ನಿರ್ವಹಿಸಬೇಕಾದ ಪೂರ್ಣ ವಿಷಯಗಳು ಇತ್ಯರ್ಥವಾಗದೇ ಬಾಕಿ ಇರುವುದು ಕಂಡು ಬಂದಿದೆ.

(vii) ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಅನುಚ್ಛೇಧ–1ರ ಮಹಾನಗರಪಾಲಿಕೆ ಮತ್ತು ಸ್ಥಾಯಿ ಸಮಿತಿಗಳ ಕಾರ್ಯನಿರ್ವಹಣಾ ನಿಯಮಗಳು, 1998ರ ನಿಯಮ 101ರ ಪ್ರಕಾರ ಪ್ರತಿ ಸ್ಥಾಯಿ ಸಮಿತಿಗಳ ಸಭೆಯನ್ನು ಕನಿಷ್ಠ ಪಕ್ಷ ಪ್ರತಿ ವಾರಕ್ಕೆ ಒಮ್ಮೆಯಾದರೂ ನಡೆಸಬೇಕಾಗುತ್ತದೆ. ಆದರೆ ಈ ಬಗ್ಗೆ ಪರಿಶೀಲಿಸಲಾಗಿ, ಈ ನಿಯಮಕ್ಕೆ ವ್ಯತಿರಿಕ್ತವಾಗಿ ಬೆಳಗಾವಿ ಮಹಾನಗರಪಾಲಿಕೆಯ ವಿವಿಧ ಸ್ಥಾಯಿ ಸಮಿತಿಗಳ ಸಭೆಯನ್ನು ನಡೆಸುವಲ್ಲಿ ಈ ಕೆಳಕಂಡಂತೆ ಕೊರತೆ ಕಂಡು ಬಂದಿರುತ್ತದೆ:

ಅ) ತೆರಿಗೆ ನಿರ್ಧರಣೆ, ಹಣಕಾಸು ಮತ್ತು ಅಪೀಲುಗಳ ಸ್ಥಾಯಿ ಸಮಿತಿಗೆ ಸಂಬಂಧಿಸಿದಂತೆ 160 ಸಭೆಗಳಿಗೆ ಬದಲಾಗಿ ಕೇವಲ 16 ಸಭೆಗಳನ್ನು ನಡೆಸಲಾಗಿದೆ ಮತ್ತು 144 ಸಭೆಗಳ ಕೊರತೆ ಕಂಡು ಬರುತ್ತದೆ.

ಆ) ಸಾರ್ವಜನಿಕ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯದ ಸ್ಥಾಯಿ ಸಮಿತಿಗೆ ಸಂಬಂಧಿಸಿದಂತೆ 160 ಸಭೆಗಳಿಗೆ ಬದಲಾಗಿ ಕೇವಲ 19 ಸಭೆಗಳನ್ನು ನಡೆಸಲಾಗಿದೆ ಮತ್ತು 141 ಸಭೆಗಳ ಕೊರತೆ ಕಂಡು ಬರುತ್ತದೆ.

ಇ) ನಗರ ಯೋಜನೆ ಮತ್ತು ಅಭಿವೃದ್ಧಿ ಸ್ಥಾಯಿ ಸಮಿತಿಗೆ ಸಂಬಂಧಿಸಿದಂತೆ 160 ಸಭೆಗಳಿಗೆ ಬದಲಾಗಿ ಕೇವಲ 13 ಸಭೆಗಳನ್ನು ನಡೆಸಲಾಗಿದೆ ಮತ್ತು 147 ಸಭೆಗಳ ಕೊರತೆ ಕಂಡು ಬರುತ್ತದೆ.

ಈ) ಲೆಕ್ಕಪತ್ರಗಳ ಸ್ಥಾಯಿ ಸಮಿತಿಗೆ ಸಂಬಂಧಿಸಿದಂತೆ 160 ಸಭೆಗಳಿಗೆ ಬದಲಾಗಿ ಕೇವಲ 20 ಸಭೆಗಳನ್ನು ನಡೆಸಲಾಗಿದೆ ಮತ್ತು 140 ಸಭೆಗಳ ಕೊರತೆ ಕಂಡು ಬರುತ್ತದೆ.

(viii) ಮೇಲಿನಂತೆ ಇಲ್ಲಿಯವರೆಗೆ ವಿವಿಧ ಸ್ಥಾಯಿ ಸಮಿತಿಗಳ ಒಟ್ಟು 640 ಸಭೆಗಳನ್ನು ಜರುಗಿಸಬೇಕಾಗಿದ್ದು, ಅದಕ್ಕೆ ಬದಲಾಗಿ 68 ಸಭೆಗಳನ್ನು ಮಾತ್ರ ಜರುಗಿಸಿದ್ದು, ಉಳಿದ 572 ಸಭೆಗಳ ಕೊರತೆ ಕಂಡು ಬಂದಿದೆ. ಇದರಿಂದಾಗಿ ಮಹಾನಗರಪಾಲಿಕೆಯು ನಿರ್ವಹಿಸಬೇಕಾದ ಪೂರ್ಣ ವಿಷಯಗಳು ಇತ್ಯರ್ಥವಾಗದೇ ಬಾಕಿ ಇರುವುದು ಕಂಡು ಬಂದಿದೆ.

(ix) ಜಿಲ್ಲಾಧಿಕಾರಿಗಳು, ಬೆಳಗಾವಿ ಇವರು ಆಯುಕ್ತರು, ಬೆಳಗಾವಿ ಮಹಾನಗರಪಾಲಿಕೆ ಇವರಿಗೆ ಬರೆದಿರುವ ಮೇಲೆ (5)ರಲ್ಲಿ ಓದಲಾದ ದಿನಾಂಕ 18/07/2011ರ ಪತ್ರದಲ್ಲಿ ಬೆಳಗಾವಿ ಮಹಾನಗರಪಾಲಿಕೆಯಲ್ಲಿ ಈ ರೀತಿ ನಿಯಮಬದ್ಧವಾಗಿ ಸಾಮಾನ್ಯ ಸಭೆಯ ಮತ್ತು ಸ್ಥಾಯಿ ಸಮಿತಿಗಳ ಸಭೆಗಳನ್ನು ನಡೆಸದಿರುವುದರಿಂದ ಬೆಳಗಾವಿ ಮಹಾನಗರಪಾಲಿಕೆ ವ್ಯಾಪ್ತಿಯಲ್ಲಿ ವಿವಿಧ ಯೋಜನೆ ಅನುಷ್ಠಾನಗೊಳಿಸುವಲ್ಲಿ ವಿಳಂಬವಾಗಿರುತ್ತದೆಂದು ಮತ್ತು ಸಾರ್ವಜನಿಕರು ಸರ್ಕಾರದ ಯೋಜನೆಗಳ ಸೌಲಭ್ಯಗಳಿಂದ ವಂಚಿತರಾಗಿರುತ್ತಾರೆಂದು ತಿಳಿಸಿರುತ್ತಾರೆ. ವಿವರ ಕೆಳಗಿನಂತಿದೆ.

ಅ) 2010–11ನೇ ಸಾಲಿನ 13ನೇ ಹಣಕಾಸು ಯೋಜನೆಯಲ್ಲಿ ಅನುದಾನ ಇಲ್ಲಿಯವರೆಗೆ ವಿನಿಯೋಗಿಸಿರುವುದಿಲ್ಲ.

ಆ) 2011–12ನೇ ಸಾಲಿನ 13ನೇ ಹಣಕಾಸು ಯೋಜನೆಯ ಅನುದಾನ ಹಂಚಿಕೆಯಾಗಿದ್ದು, ಅದಕ್ಕೆ ಕ್ರಿಯಾ ಯೋಜನೆ ತಯಾರಿಸಿ ಕೌನ್ಸಿಲ್ ಅನುಮೋದನೆ ಪಡೆದು ಸಲ್ಲಿಸಿರುವುದಿಲ್ಲ.

ಇ) 2010–11ನೇ ಸಾಲಿನ ಎಸ್.ಎಫ್.ಸಿ. ಯೋಜನೆಯ ಶೇ.22.75ರಡಿ ರೂ.232.29 ಲಕ್ಷ ಅನುದಾನ ವಿನಿಯೋಗಿಸದೆ ಬಾಕಿ ಇರುವದು ಮತ್ತು ಮಹಾನಗರಪಾಲಿಕೆಯ ಅನುದಾನದ ಶೇ.22.75ರಡಿ ರೂ.37.73 ಲಕ್ಷ ಅನುದಾನ ಉಪಯೋಗಿಸದೇ ಬಾಕಿ ಇರುವುದು.

ಈ) 2010–11ನೇ ಸಾಲಿನ ಎಸ್.ಎಫ್.ಸಿ. ಯೋಜನೆಯ ಮುಕ್ತನಿಧಿ ಅಡಿ ರೂ.401.95 ಲಕ್ಷ ಅನುದಾನ ವಿನಿಯೋಗಿಸದೆ ಬಾಕಿ ಇರುವುದು.

ಉ) 2011–12ನೇ ಸಾಲಿನ ಎಸ್.ಎಫ್.ಸಿ. ಯೋಜನೆಯ ಅನುದಾನ ಹಂಚಿಕೆಯಾಗಿದ್ದು, ಅದಕ್ಕೆ ಕ್ರಿಯಾ ಯೋಜನೆ ತಯಾರಿಸಿ ಕೌನ್ಸಿಲ್ ಅನುಮೋದನೆ ಪಡೆದು ಸಲ್ಲಿಸಿರುವುದಿಲ್ಲ.

(x) ಮಹಾಪೌರರು, ಬೆಳಗಾವಿ ಮಹಾನಗರಪಾಲಿಕೆ, ಇವರು ಅಧಿಕಾರ ದುರುಪಯೋಗ ಪಡಿಸಿಕೊಂಡಿರುವ ಕುರಿತು ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರು ಮೇಲೆ (6)ರಲ್ಲಿ ಓದಲಾದ ದಿನಾಂಕ 19/7/2011ರ ಪತ್ರದಲ್ಲಿ ಸರ್ಕಾರಕ್ಕೆ ವರದಿ

ಸಲ್ಲಿಸಿರುತ್ತಾರೆ. ಈ ವರದಿಯಲ್ಲಿ ಬೆಳಗಾವಿ ಮಹಾನಗರಪಾಲಿಕೆಯ ಉಪ ಮಹಾಪೌರರು ಮತ್ತು ಇತರ ಸದಸ್ಯರುಗಳ ದಿನಾಂಕ 15/7/2011ರ ಮನವಿಯನ್ನು ಉಲ್ಲೇಖಿಸಿ ಈ ಕೆಳಕಂಡಂತೆ ವರದಿ ಮಾಡಲಾಗಿದೆ.

ಅ) ದಿನಾಂಕ 7/4/2011ರಂದು ಮೇಯರ್ ಹುದ್ದೆಯನ್ನು ಪಡೆದ ನಂತರ ಈವತ್ತಿನವರೆಗೆ ಸದ್ರಿಯವರು ತಮ್ಮದೆ ಆದ ಒಂದು ಗುಂಪು ರಚಿಸಿ ಕಾರ್ಯ ನಿರ್ವಹಿಸುತ್ತಿದ್ದು ಇನ್ನುಳಿದ ಯಾವುದೇ ಸದಸ್ಯರ ಕಾರ್ಯವನ್ನು ಗಣನೆಗೆ ತೆಗೆದುಕೊಳ್ಳುತ್ತಿರುವುದಿಲ್ಲ. ಸದ್ರಿಯವರು ಈವರೆಗೆ ಆಡಳಿತ ಪಕ್ಷದ ಮುಖ್ಯಸ್ಥರನ್ನು ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಪ್ರೊಸೀಜರ್ ಫಾರ್ ದಿ ಕಂಡಕ್ಟ್ ಆಫ್ ಬಿಸಿನೆಸ್ ಆಫ್ ದಿ ಕಾರ್ಪೊರೇಷನ್ ಮತ್ತು ಕಮಿಟಿ ನಿಯಮಗಳು, 1998ರ ನಿಯಮ 1(4)ರ ಪ್ರಕಾರ ನೇಮಕಾತಿ ಮಾಡಿರುವುದಿಲ್ಲ. ಅದರಂತೆ ನಿಯಮ 1(8)ರ ಪ್ರಕಾರ ವಿರೋಧ ಪಕ್ಷದ ನಾಯಕನನ್ನು ಕೂಡ ನೇಮಿಸಿದ್ದು ಇರುವುದಿಲ್ಲ.

ಆ) ದಿನಾಂಕ 28/6/2011ರಂದು ಬಜೆಟ್ ಮಂಡನೆ ಕುರಿತು ಸಭೆಯನ್ನು ಕರೆದು ರೂ. 282.55 ಲಕ್ಷ ಹೆಚ್ಚುವರಿ ಮೊತ್ತಕ್ಕೆ ಅವಿರೋಧವಾಗಿ ಬಜೆಟ್‌ನ್ನು ಮಂಜೂರು ಮಾಡಿ ಸರಕಾರಕ್ಕೆ ಮಂಜೂರು ಕುರಿತು ಸಲ್ಲಿಸಲಾಗಿದೆ. ಸದರಿ ಬಜೆಟ್‌ನಲ್ಲಿ ಮೇಯರ್‌ರವರು ಹೆಚ್ಚಿನ ಪ್ರಮಾಣದಲ್ಲಿ ಬದಲಾವಣೆ ಮಾಡಿದ್ದು ಹಾಗೂ ಅಧಿಕಾರವನ್ನು ದುರುಪಯೋಗ ಮಾಡಿಕೊಂಡಿರುವ ಬಗ್ಗೆ ತಿಳಿಸಿರುತ್ತಾರೆ. ಸದರಿಯವರು ಯಾವುದೇ ಕಾಮಗಾರಿಯನ್ನು ಕೈಗೊಳ್ಳುವ ಪೂರ್ವದಲ್ಲಿ ಮಹಾನಗರಪಾಲಿಕೆಯ ಸದಸ್ಯರ ಗಮನಕ್ಕೆ ತಂದಿರುವುದಿಲ್ಲ.

(xi) ಮಹಾನಗರಪಾಲಿಕೆಗಳ ಆಯ–ವ್ಯಯ ಅಂದಾಜು ಪತ್ರಕ್ಕೆ ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಸೆಕ್ಷನ್ 170ರ ಅಡಿ ಸರ್ಕಾರದ ಅನುಮೋದನೆ ಪಡೆದುಕೊಳ್ಳಬೇಕಾಗುತ್ತದೆ. ಇದರಲ್ಲಿ ಹೇಳಿರುವಂತೆ ಆರ್ಥಿಕ ವರ್ಷ ಪ್ರಾರಂಭಕ್ಕೆ ಕನಿಷ್ಠ 3 ವಾರಗಳ ಅವಧಿಗಿಂತ ಮುಂಚಿತವಾಗಿ ಪಾಲಿಕೆಯು ಆಯ–ವ್ಯಯ ಅಂದಾಜು ಪತ್ರಕ್ಕೆ ಅನುಮೋದನೆ ಕೋರಿ ಸರ್ಕಾರಕ್ಕೆ ಸಲ್ಲಿಸಬೇಕಾಗಿರುತ್ತದೆ. ಆದರೆ ಮೇಲೆ (7)ರಲ್ಲಿ ಓದಲಾದ ಬೆಳಗಾವಿ ಮಹಾನಗರಪಾಲಿಕೆಯ ವಿಶೇಷ ಸಾಮಾನ್ಯ ಸಭೆಯ ದಿನಾಂಕ 28/6/2011ರ ನಡವಳಿ ಮತ್ತು ಮೇಲೆ (8)ರಲ್ಲಿ ಓದಲಾದ ಆಯುಕ್ತರು, ಬೆಳಗಾವಿ ಮಹಾನಗರಪಾಲಿಕೆ ಇವರ ಪತ್ರ ದಿನಾಂಕ 13/7/2011ಅನ್ನು ಪರಿಶೀಲಿಸಿದಾಗ ಬೆಳಗಾವಿ ಮಹಾನಗರಪಾಲಿಕೆಯ ಸಾಮಾನ್ಯ ಸಭೆಯು ಮಹಾನಗರಪಾಲಿಕೆಯ 2011–12ನೇ ಸಾಲಿನ ಆಯವ್ಯಯ ಅಂದಾಜು ಪಟ್ಟಿಗೆ ದಿನಾಂಕ 28/6/2011ರಲ್ಲಿ ಅನುಮೋದನೆ ನೀಡಿರುವುದು ಕಂಡು ಬರುತ್ತದೆ. ಹಾಗೂ ಸದರಿ ಆಯ–ವ್ಯಯ ಅಂದಾಜು ಪಟ್ಟಿಯನ್ನು ಆರ್ಥಿಕ ವರ್ಷ ಪ್ರಾರಂಭವಾದ ನಂತರ ಸರ್ಕಾರಕ್ಕೆ ಸಲ್ಲಿಸಲಾಗಿದೆ. ಇದರಿಂದಾಗಿ ಮಹಾನಗರಪಾಲಿಕೆಗಳ ಆಯ–ವ್ಯಯ ಅಂದಾಜು ಪತ್ರಕ್ಕೆ ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976 ಸೆಕ್ಷನ್ 170ರಂತೆ ಕ್ರಮ ನಿರ್ವಹಿಸುವಲ್ಲಿ ಬೆಳಗಾವಿ ಮಹಾನಗರಪಾಲಿಕೆಯು ವಿಫಲವಾಗಿರುವುದು ಕಂಡು ಬರುತ್ತದೆ.

(xii) ಮೇಲೆ (10)ರಲ್ಲಿ ಓದಲಾದ ಆಯುಕ್ತರು, ಬೆಳಗಾವಿ ಮಹಾನಗರಪಾಲಿಕೆ ಇವರ ದಿನಾಂಕ 29/10/2011ರ ಪತ್ರದಲ್ಲಿ ಬೆಳಗಾವಿ ಮಹಾನಗರಪಾಲಿಕೆಯಲ್ಲಿ ಶ್ರೀ ಚಂದ್ರಶೇಖರ ಕಂಬಾರ, ಜ್ಞಾನಪೀಠ ಪ್ರಶಸ್ತಿ ವಿಜೇತರು ಇವರನ್ನು ಅಭಿನಂದಿಸುವ ಗೊತ್ತುವಳಿ ಅಂಗೀಕರಿಸುವ ಬಗ್ಗೆ ದಿನಾಂಕ 29/09/2011ರಂದು ನಡೆದ ಪರಿಷತ್ ಸಭೆಯಲ್ಲಿ ಉಂಟಾದ ಗೊಂದಲದ ಬಗ್ಗೆ ವರದಿ ಸಲ್ಲಿಸಿರುತ್ತಾರೆ. ಈ ವರದಿಯಲ್ಲಿ ಕಂಡುಬರುವಂತೆ ಡಾ. ಚಂದ್ರಶೇಖರ ಕಂಬಾರರವರಿಗೆ ಜ್ಞಾನಪೀಠ ಪ್ರಶಸ್ತಿ ನೀಡಿರುವ ವಿಷಯವನ್ನು ಬೆಳಗಾವಿ ಮಹಾನಗರಪಾಲಿಕೆಯಲ್ಲಿ ದಿನಾಂಕ 29/9/2011ರಂದು ನಡೆದ ಸಾಮಾನ್ಯ ಸಭೆಯಲ್ಲಿ ಚರ್ಚಿಸಿ ಜ್ಞಾನಪೀಠ ಪ್ರಶಸ್ತಿಗೆ ಆಯ್ಕೆಯಾಗಿದ್ದಕ್ಕಾಗಿ ಡಾ. ಚಂದ್ರಶೇಖರ ಕಂಬಾರ ರವರಿಗೆ ಅಭಿನಂದನಾ ನಡವಳಿಯನ್ನು ಅಂಗೀಕರಿಸಲು ಪ್ರಯತ್ನಿಸಿದಾಗ ಶ್ರೀ ಸಂಭಾಜಿ ಬಂಡು ಚವ್ಹಾಣ, ಸದಸ್ಯರು, ಬೆಳಗಾವಿ ಮಹಾನಗರಪಾಲಿಕೆ ಮತ್ತು ಇತರ 15 ಮಂದಿ ಸದಸ್ಯರು ಅಭಿನಂದನಾ ನಡವಳಿಯನ್ನು ವಿರೋಧಿಸಿರುತ್ತಾರೆ ಮತ್ತು ಈ ಬಗ್ಗೆ ಸದರಿ ಸಭೆಯ ನಡವಳಿಯಲ್ಲಿ ದಾಖಲಾಗಿರುತ್ತದೆ. ಅಲ್ಲದೆ ಡಾ. ಚಂದ್ರಶೇಖರ ಕಂಬಾರ ರವರಿಗೆ ಅಭಿನಂದನಾ ನಡವಳಿಯನ್ನು ಅಂಗೀಕರಿಸಲು ವಿರೋಧಿಸಿರುವ ವಿಷಯವು ದಿನಪತ್ರಿಕೆಗಳಲ್ಲಿ ಪ್ರಕಟವಾಗಿರುತ್ತದೆಂದು ತಿಳಿಸಿರುತ್ತಾರೆ.

(xiii) ಕನ್ನಡ ನಾಡಿನ ಶ್ರೇಷ್ಠ ಕವಿಗಳು ಮತ್ತು ಬರಹಗಾರರಲ್ಲಿ ಒಬ್ಬರಾದ ಡಾ. ಚಂದ್ರಶೇಖರ ಕಂಬಾರ ರವರಿಗೆ ಭಾರತದ ಅತ್ಯಂತ ಸರ್ವಶ್ರೇಷ್ಠ ಸಾಹಿತ್ಯ ಪ್ರಶಸ್ತಿಯಾದ ಜ್ಞಾನಪೀಠ ಪ್ರಶಸ್ತಿಯನ್ನು ನೀಡಲಾಗಿದೆ. ಇದು ಇಡೀ ಕರ್ನಾಟಕ ಜನತೆಗೆ ಹೆಮ್ಮೆಯ ವಿಷಯವಾಗಿದ್ದು ಕರ್ನಾಟಕ ಸರ್ಕಾರವೂ ಸೇರಿದಂತೆ ಕನ್ನಡ ನಾಡಿನ ಸಮಸ್ತ ಜನತೆಯು ಡಾ. ಚಂದ್ರಶೇಖರ ಕಂಬಾರ ರವರಿಗೆ ಜ್ಞಾನಪೀಠ ಪ್ರಶಸ್ತಿ ನೀಡಿರುವುದನ್ನು ಅಭಿಮಾನದಿಂದ ಸ್ವಾಗತಿಸಿರುತ್ತದೆ.

(xiv) ಪರಿಶೀಲಿಸಲಾಗಿ, ಡಾ. ಚಂದ್ರಶೇಖರ ಕಂಬಾರರವರಿಗೆ ಜ್ಞಾನಪೀಠ ಪ್ರಶಸ್ತಿ ನೀಡಿರುವ ವಿಷಯವನ್ನು ಬೆಳಗಾವಿ ಮಹಾನಗರಪಾಲಿಕೆಯಲ್ಲಿ ದಿನಾಂಕ 29/9/2011ರಂದು ನಡೆದ ಸಾಮಾನ್ಯ ಸಭೆಯಲ್ಲಿ ಚರ್ಚಿಸಿ ಜ್ಞಾನಪೀಠ ಪ್ರಶಸ್ತಿಗೆ ಆಯ್ಕೆಯಾಗಿದ್ದಕ್ಕಾಗಿ ಡಾ. ಚಂದ್ರಶೇಖರ ಕಂಬಾರ ರವರಿಗೆ ಅಭಿನಂದನಾ ನಡವಳಿಯನ್ನು ಅಂಗೀಕರಿಸಲು ಪ್ರಯತ್ನಿಸಿದಾಗ ಶ್ರೀ

ಸಂಭಾಜಿ ಬಂಡು ಚವ್ಹಾಣ, ಸದಸ್ಯರು, ಬೆಳಗಾವಿ ಮಹಾನಗರಪಾಲಿಕೆ ಮತ್ತು ಇತರರು ಸದರಿ ಅಭಿನಂದನಾ ನಡವಳಿಯನ್ನು ವಿರೋಧಿಸಿರುತ್ತಾರೆ ಮತ್ತು ಈ ಬಗ್ಗೆ ಸದರಿ ಸಭೆಯ ನಡವಳಿಯಲ್ಲಿ ದಾಖಲಾಗಿರುತ್ತದೆ. ಅಲ್ಲದೆ ಡಾ. ಚಂದ್ರಶೇಖರ ಕಂಬಾರ ರವರಿಗೆ ಅಭಿನಂದನಾ ನಡವಳಿಯನ್ನು ಅಂಗೀಕರಿಸಲು ವಿರೋಧಿಸಿರುವ ವಿಷಯವು ದಿನಪತ್ರಿಕೆಗಳಲ್ಲಿ ಪ್ರಕಟವಾಗಿರುತ್ತದೆ.

(xv) ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಅನುಚ್ಛೇಧ–1ರ ಮಹಾನಗರಪಾಲಿಕೆ ಮತ್ತು ಸ್ಥಾಯಿ ಸಮಿತಿಗಳ ಕಾರ್ಯನಿರ್ವಹಣಾ ನಿಯಮಗಳು, 1998ರ ನಿಯಮ 17 ಮತ್ತು 18ರ ಪ್ರಕಾರ ಅಭಿನಂದನಾ ನಡವಳಿಗಳನ್ನು ಅಂಗೀಕರಿಸಬಹುದಾಗಿರುತ್ತದೆ. ಹಾಗೂ ಸದರಿ ನಿಯಮಗಳ ನಿಯಮ 89ರ ಪ್ರಕಾರ ಕಾರ್ಯಕಲಾಪಗಳಿಗೆ ಅಡ್ಡಿಪಡಿಸುವ ಯಾವುದೇ ಸದಸ್ಯರನ್ನು ಅಮಾನತ್ತಿನಲ್ಲಿ ಇಡಬಹುದಾಗಿರುತ್ತದೆ.

(xvi) ಮೇಲೆ ಹೇಳಿದಂತೆ ಶ್ರೀ ಸಂಭಾಜಿ ಬಂಡು ಚವ್ಹಾಣ, ಸದಸ್ಯರು, ಬೆಳಗಾವಿ ಮಹಾನಗರಪಾಲಿಕೆ ಮತ್ತು ಇತರರು ಡಾ. ಚಂದ್ರಶೇಖರ ಕಂಬಾರ ರವರಿಗೆ ಅಭಿನಂದನಾ ನಡವಳಿಯನ್ನು ವಿರೋದಿಸಿರುವ ಕ್ರಮವು ಮಹಾನಗರಪಾಲಿಕೆಯ ಕಾರ್ಯಕಲಾಪಗಳಿಗೆ ಅಡ್ಡಿಪಡಿಸಿರುವುದಲ್ಲದೆ ಸಮಸ್ತ ಕನ್ನಡಿಗರ ಭಾವನೆಗಳಿಗೆ ಮತ್ತು ಕರ್ನಾಟಕ ಸರ್ಕಾರವು ಡಾ. ಚಂದ್ರಶೇಖರ ಕಂಬಾರ ರವರಿಗೆ ಜ್ಞಾನಪೀಠ ಪ್ರಶಸ್ತಿ ನೀಡಿರುವ ಕ್ರಮವನ್ನು ಅಧಿಕೃತವಾಗಿ ಸ್ವಾಗತಿಸಿರುವ ಕ್ರಮಕ್ಕೆ ವಿರೋಧವಾಗಿರುವುದರಿಂದ ಸದರಿ ಸದಸ್ಯರುಗಳ ವಿರುದ್ಧ ಕರ್ನಾಟಕ ಪೌರನಿಗಮಗಳ (ಮಹಾನಗರಪಾಲಿಕೆ ಮತ್ತು ಸ್ಥಾಯಿ ಸಮಿತಿಗಳ ಕಾರ್ಯನಿರ್ವಹಣಾ ಪದ್ಧತಿ) ನಿಯಮಗಳು, 1998ರ ನಿಯಮ 89ರ ಪ್ರಕಾರ ಮಹಾಪೌರರು ಕ್ರಮ ಕೈಗೊಂಡು ಅಡ್ಡಿಪಡಿಸಿದ ಸದಸ್ಯರುಗಳನ್ನು ಪ್ರಸ್ತುತ ಮಹಾನಗರಪಾಲಿಕೆಯ ಉಳಿದ ಅವಧಿಗೆ ಅಮಾನತ್ತಿನಲ್ಲಿಡುವುದೂ ಸೇರಿದಂತೆ ಶಿಸ್ತು ಕ್ರಮ ಕೈಗೊಳ್ಳಬೇಕಾಗಿತ್ತು. ಆದರೆ ಮಹಾಪೌರರು ನಿಯಮಾನುಸಾರ ಕ್ರಮ ಕೈಗೊಳ್ಳದಿರುವುದು ಮತ್ತು ಬೆಳಗಾವಿ ಮಹಾನಗರಪಾಲಿಕೆಯು ನಿಯಮಾನುಸಾರ ಕಾರ್ಯನಿರ್ವಹಣೆ ಮಾಡದಿರುವುದು ಕಂಡು ಬರುತ್ತದೆ.

(xvii) ಮೇಲಿನ ಅಂಶಗಳನ್ನು ಅವಲೋಕಿಸಿದಾಗ, ಬೆಳಗಾವಿ ಮಹಾನಗರಪಾಲಿಕೆಯ ಕಾರ್ಯವ್ಯವಹಾರಗಳು ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976 ಮತ್ತು ಇತರೆ ಅನ್ವಯವಾಗತಕ್ಕ ಕಾನೂನು ಮತ್ತು ನಿಯಮಾವಳಿಗಳಂತೆ ನಡೆಯುತ್ತಿರುವುದು ಕಂಡುಬರುವುದಿಲ್ಲ.

4) ಮೇಲೆ (9)ರಲ್ಲಿ ಓದಲಾದ ದಿನಾಂಕ 24/11/2011ರ ಕಾರಣ ಕೇಳುವ ಸೂಚನಾ ಪತ್ರಕ್ಕೆ ಮೇಲೆ (11)ರಲ್ಲಿ ಓದಲಾದ ದಿನಾಂಕ 7/12/2011ರ ಪತ್ರದಲ್ಲಿ ಮಹಾಪೌರರು, ಬೆಳಗಾವಿ ಮಹಾನಗರಪಾಲಿಕೆ ಇವರು ಮತ್ತು ದಿನಾಂಕ 25/06/2012ರಂದು ಬೆಳಗಾವಿ ಜಿಲ್ಲಾ ಪಂಚಾಯಿತಿ ಸಭಾಂಗಣದಲ್ಲಿ ಬೆಳಗಾವಿ ಮಹಾನಗರಪಾಲಿಕೆಯ ಮಹಾಪೌರರು ಸೇರಿದಂತೆ 55 ಸದಸ್ಯರುಗಳು ಸರ್ಕಾರಕ್ಕೆ ಸಲ್ಲಿಸಿರುವ ಲಿಖಿತ/ಮೌಖಿಕ ಉತ್ತರಗಳನ್ನು ಹಾಗೂ ನೋಟೀಸನ್ನು ಹಿಂದಕ್ಕೆ ತೆಗೆದುಕೊಳ್ಳಲು ಮತ್ತು ಅದರ ಮೇಲೆ ಮುಂದಿನ ನಡವಳಿಗಳನ್ನು ಕೈಬಿಡಲು ಈ ಕೆಳಕಂಡ ಕಾರಣಗಳನ್ನು ನೀಡಿ ಆಪಾದನೆಗಳನ್ನು ನಿರಾಕರಿಸಿರುತ್ತಾರೆ:

ಅ) ಮಹಾನಗರಪಾಲಿಕೆ ಪರಿಷತ್ ಸಭೆ ಹಾಗೂ ಸ್ಥಾಯಿ ಸಮಿತಿಗಳು ನಿಯಮಿತವಾಗಿ ನಡೆಸಿರುವುದಿಲ್ಲ ಎಂಬ ಅಪಾದನೆ ಸರಿಯಲ್ಲ. ನಿಗಧಿತ ಮಂಜೂರಾದ ಹುದ್ದೆಗಳು ಪಾಲಿಕೆಯಲ್ಲಿ ಖಾಲಿ ಇದ್ದು, ಅದರಲ್ಲಿ ಪರಿಷತ್ ಕಾರ್ಯದರ್ಶಿ ಅವರ ಹುದ್ದೆ ಹಲವಾರು ವರ್ಷಗಳಿಂದ ಖಾಲಿ ಇದ್ದು ಅದರ ಹಾಗೆ ಮುಖ್ಯ ಲೆಕ್ಕಾಧಿಕಾರಿ, ಕಂದಾಯ ಅಧಿಕಾರಿಗಳಂತಹ ಮಹತ್ವವಾದ ಹುದ್ದೆಗಳು ಇನ್ನೂವರೆಗೆ ಸರಕಾರದಿಂದ ನಿಯೋಜನೆಯಾಗಿರುವದಿಲ್ಲ. ಅದರಂತೆ ಸಿಬ್ಬಂದಿ ಕೊರತೆಯ ಮದ್ಯೆಯೂ ನಿಗಧಿತವಾಗಿ ಸಭೆಗಳನ್ನು ನಡೆಸಿ ಸೂಕ್ತ ಅವಶ್ಯಕ ನಿರ್ಣಯಗಳನ್ನು ಕೈಗೊಳ್ಳಲಾಗಿದೆ. ಪಾಲಿಕೆಯ ಚುನಾವಣೆ ಮಂಡಳಿಯು ಕಾಲನುಕಾಲ ಸಭೆ ಸೇರಿ ಸೂಕ್ತ ನಿರ್ಣಯ ಕೈಗೊಂಡು ಜನತೆಯ ಆಶೋತ್ತರಗಳಿಗೆ ಸ್ಪಂದಿಸಲಾಗಿದೆ. ಇದರ ಫಲವಾಗಿ ಈ ಕೆಳಗಿನ ಪ್ರಶಸ್ತಿಗಳು ಪಾಲಿಕೆಗೆ ಲಭಿಸಿವೆ.

1) The best urban body Award 2009-10 – Best Performance in Municipal Services in the State considering overall prize of Rs.2 lakhs.

2) Greenleaf Award 2011 – In the category of best garbage disposal field of solid waste management, BCC.

3) Open well project at National Level for BCC in Technical Innovation Category was Awarded.

4) 24x7 National Level Attraction & Successfully Completed in Belgaum was Awarded with State National & International Level.

ಆ) ಪಾಲಿಕೆಯ ಸಭೆ ಜರುಗಿಸದೆ ಇರುವುದರಿಂದ ಸರ್ಕಾರ ನೀಡಿದ ಅನುದಾನ ಬಳಕೆಯಾಗಿರುವುದಿಲ್ಲ ಎಂಬ ಆಪಾದನೆಯೂ ಸಹ ಸರಿಯಲ್ಲ. ಸರ್ಕಾರದ ಮಾರ್ಗಸೂಚಿಯನ್ವಯ ಶೇಕಡ 22.75ರ ಫಲಾನುಭವಿಗಳು ಲಭ್ಯವಾಗಿರದೆ ಇರುವುದರಿಂದ ಕೇವಲ ಸದರಿ

ಅನುದಾನ ಪೂರ್ಣ ಪ್ರಮಾಣದಲ್ಲಿ ಬಳಕೆಯಾಗಿಲ್ಲ. ಸರ್ಕಾರ ವಿಧಿಸಿದ ಷರತ್ತುಗಳನ್ನು ಫಲಾನುಭವಿಗಳು ಪೂರೈಸದೆ ಇರುವುದು ಅನುದಾನ ಬಾಕಿ ಉಳಿಯಲು ಕಾರಣವಾಗಿದೆ. ಷರತ್ತುಗಳನ್ನು ಪೂರೈಸಿದ ನಾಗರೀಕರಿಗೆ ಅವಶ್ಯಕ ಸೌಲಭ್ಯಗಳನ್ನು ಪೂರೈಸಲಾಗಿದೆ. ಹಾಗೂ ಇನ್ನುಳಿದ ಅನುದಾದ ಬಳಿಕೆಯ ಕುರಿತು ಷರತ್ತುಗಳ ಪಾಲನೆ ಮಾಡಲು ನಾಗರೀಕರ ಮನ ಒಲೈಸಲಾಗುತ್ತಿದೆ.

ಇ) ಮಹಾಪೌರರು ಅಧಿಕಾರ ದುರುಪಯೋಗ ಪಡಿಸಿಕೊಂಡಿರುತ್ತಾರೆ ಎಂಬುವ ಆಪಾದನೆ ಸಮರ್ಥನೀಯವಲ್ಲ ಮಹಾಪೌರರಾಗಿ ಹುದ್ದೆಗೆ ಯಾವುದೇ ಗುಂಪಿನೊಂದಿಗೆ ಗುರುತಿಸಿ ಕೊಳ್ಳದೆ ನಿಷ್ಪಕ್ಷಪಾತವಾಗಿ ನಿಯಮಾನುಸಾರ ಕರ್ತವ್ಯ ನಿಭಾಯಿಸಿರುತ್ತೇನೆ. ಪಾಲಿಕೆ ಆಡಳಿತ ಪಕ್ಷದ ನಾಯಕರನ್ನು ಹಾಗೂ ವಿರೋಧಿ ಪಕ್ಷದ ನಾಯಕರನ್ನು ನಿಯಮಾನುಸಾರ ಮಾನ್ಯತೆ ನೀಡಲಾಗಿದೆ.

ಈ) ದಿನಾಂಕ 28/6/2011ರಂದು ಬಜೆಟ ಮಂಡನೆ ಕುರಿತು ರೂ.282.55 ಲಕ್ಷ ಹೆಚ್ಚುವರಿ ಮೊತ್ತಕ್ಕೆ ಅವಿರೋಧವಾಗಿ ಬಜೆಟನ್ನು ಮಂಜೂರು ಮಾಡಿ ಸರ್ಕಾರಕ್ಕೆ ಮಂಜೂರು ಕುರಿತು ಸಲ್ಲಿಸಲಾಗಿದೆ. ಸದರಿ ಬಜೆಟ್‌ನಲ್ಲಿ ಮೇಯರ ಇವರು ಹೆಚ್ಚಿನ ಪ್ರಮಾಣ ಬದಲಾವಣೆ ಮಾಡಿದ್ದು, ಹಾಗೂ ಅಧಿಕಾರವನ್ನು ದುರುಪಯೋಗ ಮಾಡಿರುವುದನ್ನು ತಿಳಿಸಿರುತ್ತಾರೆ, ಮತ್ತು ಸದರಿಯವರು ಯಾವುದೇ ಕಾಮಗಾರಿ ಕೈಗೊಳ್ಳುವ ಪೂರ್ವದಲ್ಲಿ ಮಹಾನಗರಪಾಲಿಕೆ ಸದಸ್ಯರ ಗಮನಕ್ಕೆ ತಂದಿರುವುದಿಲ್ಲ ಎಂಬುವುದು ಸರಿಯಲ್ಲ. ಬಜೆಟ್ ಬಗ್ಗೆ ಆಪಾದನೆ ಸತ್ಯವಾಗಿರುವುದಿಲ್ಲ. ಸ್ಥಾಯಿ ಸಮಿತಿ ಮಂಡಿಸಿದ ಬಜೆಟ್ ಅನ್ನು ಪರಿಷತ್ ಸಭೆಯಲ್ಲಿ ಪರಾಮರ್ಶಿಸಿ ಗೊತ್ತುವಳಿ ಅಂಗೀಕಾರವಾಗಿದೆ.

ಉ) ದಿನಾಂಕ 29/9/2011 ರಂದು ಜರುಗಿದ ಪಾಲಿಕೆಯ ಸಾಮಾನ್ಯ ಸಭೆಯಲ್ಲಿ ಜ್ಞಾನಪೀಠ ಪ್ರಶಸ್ತಿ ವಿಜೇತ ಡಾ: ಚಂದ್ರಶೇಖರ ಕಂಬಾರ ಇವರಿಗೆ ಅಭಿನಂಧಿಸುವ ವಿಷಯ ಪಾಲಿಕೆಯ ಸಭೆಯಲ್ಲಿ ಪ್ರಸ್ತಾಪವಾದಾಗ ಅಭಿನಂಧನೆ ವಿರೋಧವಾಗಿರುವುದಿಲ್ಲ. ಭಾಷಾ ಮಾಧ್ಯಮ ಶಿಕ್ಷಣ ಕುರಿತು ಡಾ: ಚಂದ್ರಶೇಖರ ಕಂಬಾರ ಅಭಿಪ್ರಾಯಕ್ಕೆ ಕೇವಲ ಒಬ್ಬ ನಗರಸೇವಕರು ವಿರೋಧಿಸಿರುತ್ತಾರೆ. ಮುಂದಿನ ಸಭೆಯಲ್ಲಿ, ಅಂದರೆ ದಿನಾಂಕ 30/11/2011ರ ಸಭೆಯಲ್ಲಿ ಸರ್ವಾನುಮತದಿಂದ ಅಭಿನಂದನಾಪರ ಗೊತ್ತುವಳಿ ಅಂಗೀಕರಿಸಲಾಗಿದೆ. ಡಾ: ಚಂದ್ರಶೇಖರ ಕಂಬಾರ ಅವರಿಗೆ ಅವಮಾನ ಮಾಡುವ ರೀತಿಯಲ್ಲಿ ಯಾವುದೇ ಸದಸ್ಯರು ನಡೆದುಕೊಂಡಿರುವುದಿಲ್ಲ. ಅವಮಾನಕರವಾಗುವ ರೀತಿಯಲ್ಲಿ ನಡೆದುಕೊಳ್ಳದೇ ಇರುವುದರಿಂದ, ಕನ್ನಡ ನಾಡು ನುಡಿಗೆ ಅಗೌರವ ತೋರಿಸಿದ ಪ್ರಶ್ನೆ ಉದ್ಭವಿಸುವುದಿಲ್ಲ.

ಊ) ಕರ್ನಾಟಕ ಮಹಾನಗರಪಾಲಿಕೆ ಕಾನೂನಿನ ಅನುಸಾರವಾಗಿ ನಿಯಮಿತವಾಗಿ ಸಭೆಗಳನ್ನು ನಡೆಸಿ ಅವಶ್ಯ ಕ್ರಮ ಜರುಗಿಸಲಾಗಿರುತ್ತದೆ. ಯಾವುದೇ ನಿಯಮಗಳನ್ನು ಉಲ್ಲಂಘನೆ ಮಾಡಿರುವುದಿಲ್ಲ. ಕಾನೂನಿನ ಅಡಿ ಕೈಗೊಳ್ಳಬೇಕಾದ ಅವಶ್ಯಕ ಎಲ್ಲಾ ಕ್ರಮಗಳನ್ನು ಕೈಗೊಂಡಿದೆ. ಆದುದರಿಂದ ಸೆಕ್ಷನ್ 99ರ ಪ್ರಕಾರ ಕ್ರಮ ಜರುಗಿಸುವ ಅವಶ್ಯಕತೆ ಇರುವುದಿಲ್ಲ. ಸೆಕ್ಷನ್ 100 ಸಹ ಅನ್ವಯವಾಗುವುದಿಲ್ಲ.

ಋ) ಸರ್ಕಾರ ಕಾರಣ ಕೇಳಿ ನೋಟೀಸ್ ಕುರಿತು ದಿನಾಂಕ 30/11/2011ರಂದು ಜರುಗಿದ ಸಾಮಾನ್ಯ ಸಭೆಯಲ್ಲಿ ಸರ್ವ ಸದಸ್ಯರ ಅಭಿಪ್ರಾಯದಂತೆ ಚರ್ಚಿಸಲಾಗಿದೆ. ಪರಿಷತ್ ಸಭೆ ತೀರ್ಮಾನದ ಪ್ರಕಾರ ಕಾರಣ ಕೇಳಿ ನೋಟೀಸ್‌ಗೆ ವಿವರಣೆ ನೀಡಿದೆ ಪರಿಷತ್ ಅವಧಿಯೂ ಇನ್ನೂ ಒಂದೂವರೆ ವರ್ಷ ಬಾಕಿ ಇದೆ. ಐದು ವರ್ಷದ ಅವಧಿಗೆ ಪರಿಷತ್ ಚುನಾವಣೆಗೊಂಡಿದ್ದು ಐದು ವರ್ಷ ಪೂರ್ಣಗೊಳಿಸಲು ಅನುಕೂಲ ಮಾಡಿಕೊಡಬೇಕಾಗಿ ದಿನಾಂಕ 30/11/2011ರಂದು ಪರಿಷತ್ ಸಭೆಯಲ್ಲಿ ಸರ್ಕಾರಕ್ಕೆ ಮನವಿ ಮಾಡಿಕೊಳ್ಳಲಾಗಿದೆ. ಸದರಿ ವಿಷಯವನ್ನು ಗೌರವಾನ್ವಿತ ರಾಜ್ಯಪಾಲರ ಅವಗಾಹನೆಗೆ ತರುವಂತೆ ಕೋರಲಾಗಿದೆ.

ಎ) ಕಾರಣ ಕೇಳುವ ನೋಟೀಸಿನಲ್ಲಿ ತಿಳಿಸಿರುವಂತೆ ಕಡಿಮೆ ಸಂಖ್ಯೆಯಲ್ಲಿ ಸಭೆಯನ್ನು ನಡೆಸಿರುವುದಕ್ಕೆ ಮಹಾನಗರಪಾಲಿಕೆಯ ಸಿಬ್ಬಂದಿ ಕೊರತೆಯೇ ಕಾರಣವಾಗಿರುತ್ತದೆ. ಪ್ರಸಕ್ತ ಬೆಳಗಾವಿ ಮಹಾನಗರಪಾಲಿಕೆಯ ಸಾಮಾನ್ಯ ಸಭೆಯು 38 ಸಭೆಗಳನ್ನು ನಡೆಸಿರುತ್ತದೆ. ಮಹಾನಗರಪಾಲಿಕೆಗೆ ಲಭ್ಯವಾದ ಒಟ್ಟಾರೆ 1339 ದಿನಗಳ ಪೈಕಿ 320 ರಜಾ ದಿನಗಳಾಗಿರುತ್ತವೆ.

ಏ) ಮಹಾನಗರಪಾಲಿಕೆಗೆ ಪೂರ್ಣಾವಧಿ ಪರಿಷತ್ ಕಾರ್ಯದರ್ಶಿ ಇವರುವುದಿಲ್ಲ ಮತ್ತು ಕೇವಲ 5 ಜನ ಸಿಬ್ಬಂದಿ ಇರುತ್ತಾರೆ. ಕಾನೂನಿನಂತೆ ಕೆ.ಎ.ಎಸ್. ಅಧಿಕಾರಿ ನೇಮಕಗೊಂಡಿರುವುದಿಲ್ಲ.

ಐ) ಉಪ ಮಹಾಪೌರರ ಚುನಾವಣೆ ನಡೆಸುವಲ್ಲಿ 6 ತಿಂಗಳು ವಿಳಂಬವಾಗಿದೆ ಮತ್ತು ಇದರಿಂದಾಗಿ ಸ್ಥಾಯಿ ಸಮಿತಿಗಳ ರಚನೆ ವಿಳಂಬವಾಗಿದೆ.

ಒ) ಮಹಾನಗರಪಾಲಿಕೆಯ ಆಯವ್ಯಯವನ್ನು ನಿಗಧಿತ ಕಾಲಮಿತಿಯಲ್ಲಿ ಅನುಮೋದನೆ ಮಾಡದಿರಲು ಅದಕ್ಕೆ ಸೂಕ್ತ ಪ್ರಸ್ತಾವನೆಯನ್ನು ಆಯುಕ್ತರು ವಿಳಂಬವಾಗಿ ಮಂಡಿಸಿರುವುದು ಕಾರಣವಾಗಿರುತ್ತದೆ. ನಿಯಮಗಳಂತೆ ಜನವರಿ 15ರೊಳಗಾಗಿ ಸಲ್ಲಿಸಬೇಕಾಗಿದ್ದರೂ ಸಹ ಆಯುಕ್ತರು ಆ ರೀತಿ ಮಾಡಿರುವುದಿಲ್ಲ. ಇದರಿಂದಾಗಿ ಈ ವಿಳಂಬವೂ ಉದ್ದೇಶಪೂರ್ವಕವಾಗಿರುವುದಿಲ್ಲ.

ಓ) ಕೆಲವು ಸದಸ್ಯರು ಮಾಡಿದ ತಪ್ಪು ಹಾಗೂ ನಡೆದುಕೊಂಡ ರೀತಿಯಿಂದ ಅವರ ಮೇಲೆ ಕ್ರಮ ಕೈಗೊಳ್ಳುವುದನ್ನು ಬಿಟ್ಟು ಇಡೀ ಪಾಲಿಕೆಯನ್ನು ಸೂಪರ್ ಸೀಡ್ ಮಾಡುವ ಅಗತ್ಯವಿಲ್ಲ. ಆದುದರಿಂದ ಬೆಳಗಾವಿ ಮಹಾನಗರಪಾಲಿಕೆಯ ಉಳಿದ ಅವಧಿಯನ್ನು ಪೂರ್ಣಗೊಳಿಸಲು ಅವಕಾಶ ಮಾಡಿಕೊಡಬೇಕು.

ಔ) ಕಾರಣ ಕೇಳುವ ನೋಟಿಸಿನ 2ರಿಂದ 10ರವರೆಗಿನ ಕಂಡಿಕೆಗಳಲ್ಲಿ ತಿಳಿಸಿರುವ ಆರೋಪಗಳಿಗೆ 2008ರಿಂದ 2011ರವರೆಗೆ ಬಹಳಷ್ಟು ಅವಧಿಯು ಚುನಾವಣಾ ನೀತಿ ಸಂಹಿತೆಯಿಂದಾಗಿ, ಎಂ.ಎಲ್.ಸಿ. ಚುನಾವಣೆಯಿಂದಾಗಿ, ಮಹಾಪೌರರು & ಉಪ ಮಹಾಪೌರರ ಚುನಾವಣೆ, ಲೋಕಸಭಾ ಚುನಾವಣೆ, ವಾರ್ಡ್ 31ರ ಉಪ ಚುನಾವಣೆಗಳು ಕಾರಣವಾಗಿರುತ್ತವೆ. ಇದರಿಂದಾಗಿ ನಿಗಧಿತವಾಗಿ ಸಭೆಗಳನ್ನು ನಡೆಸಲು ಸಾಧ್ಯವಾಗಿರುವುದಿಲ್ಲ.

5) ಮುಂದುವರೆದು, ಬೆಳಗಾವಿ ಮಹಾನಗರಪಾಲಿಕೆಯ ಮಹಾಪೌರರಾದ ಶ್ರೀಮತಿ ಮಂದಾ ಸುನೀಲ ಬಾಳೇಕುಂದ್ರಿ ಇವರು ಸರ್ಕಾರಕ್ಕೆ ದಿನಾಂಕ 25/06/2012ರಂದು ಸಲ್ಲಿಸಿದ ಲಿಖಿತ/ಮೌಖಿಕ ಹೇಳಿಕೆಯಲ್ಲಿ ತಾವು ಈಗಾಗಲೇ ಈ ಹಿಂದೆ ತಮ್ಮ ದಿನಾಂಕ 7/12/2011ರ ಪತ್ರದಲ್ಲಿ ವಿವರಣೆ ಸಲ್ಲಿಸಿದ್ದು ಅದನ್ನೇ ಪರಿಗಣಿಸಿ ಬೆಳಗಾವಿ ಮಹಾನಗರಪಾಲಿಕೆಯನ್ನು ಪುನರ್‌ಸ್ಥಾಪಿಸಬೇಕೆಂದು ಕೋರಿರುತ್ತಾರೆ.

**6) ಮೇಲ್ಕಂಡ ಅಂಶಗಳಿಂದ, ಸರ್ಕಾರದ ವತಿಯಿಂದ ಬೆಳಗಾವಿ ಮಹಾನಗರಪಾಲಿಕೆಗೆ ನೀಡಿರುವ ಕಾರಣ ಕೇಳುವ ನೋಟೀಸಿಗೆ ಸದರಿ ಮಹಾನಗರಪಾಲಿಕೆ ನೀಡಿರುವ ವಿವರಣೆ/ಹೇಳಿಕೆಗಳಿಂದ ಈ ಕೆಳಕಂಡ ಅಂಶಗಳು ವ್ಯಕ್ತವಾಗುತ್ತವೆ.**

7) ಆಯುಕ್ತರು, ಬೆಳಗಾವಿ ಮಹಾನಗರಪಾಲಿಕೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಮೇಲೆ (11)ರಲ್ಲಿ ಓದಲಾದ ವಿವರಣೆ ಪತ್ರದಲ್ಲಿನ ವಿವರಣೆಯನ್ನು ಪರಿಶೀಲಿಸಿ, ಪರಿಗಣನೆಗೆ ತಂದುಕೊಂಡ ನಂತರ ಸರ್ಕಾರವು ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಕಲಂ 99(1)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತಕ್ಷಣದಿಂದಲೇ ಜಾರಿಗೆ ಬರುವಂತೆ ಬೆಳಗಾವಿ ಮಹಾನಗರಪಾಲಿಕೆಯನ್ನು ವಿಸರ್ಜಿಸಿ, ಮೇಲೆ (12)ರಲ್ಲಿ ಓದಲಾದ ದಿನಾಂಕ 15/12/2011ರ ಆದೇಶವನ್ನು ಹೊರಡಿಸಿತ್ತು.

8) ಮೇಲೆ (12)ರಲ್ಲಿ ಓದಲಾದ ದಿನಾಂಕ 15/12/2011ರ ಸರ್ಕಾರದ ಆದೇಶವನ್ನು ವಿರೋಧಿಸಿ ಮಹಾನಗರಪಾಲಿಕೆಯ ಕೆಲವು ಸದಸ್ಯರುಗಳು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಧಾರವಾಡ ಸಂಚಾರಿ ಪೀಠದಲ್ಲಿ ರಿಟ್ ಅರ್ಜಿ ಸಂಖ್ಯೆ: 60201, 60416, 60448–60467 ಮತ್ತು 61454/2012 ಅನ್ನು ದಾಖಲಿಸಿದ್ದರು. ಈ ಸಂಬಂಧ ಮಾನ್ಯ ಉಚ್ಚ ನ್ಯಾಯಾಲಯವು ನೀಡಿರುವ ಮೇಲೆ (13)ರಲ್ಲಿ ಓದಲಾದ ತೀರ್ಪಿನಲ್ಲಿ ಸರ್ಕಾರವು ಬೆಳಗಾವಿ ಮಹಾನಗರಪಾಲಿಕೆಯನ್ನು ವಿಸರ್ಜಿಸಿ ಹೊರಡಿಸಿದ್ದ ಸರ್ಕಾರದ ಆದೇಶ ಸಂಖ್ಯೆ: ನಅಇ 239 ಎಸಿಬಿ 2011, ದಿನಾಂಕ 15/12/2011ಕ್ಕೆ ಸಂಬಂಧಿಸಿದಂತೆ ಬೆಳಗಾವಿ ಮಹಾನಗರಪಾಲಿಕೆಯ ಸದಸ್ಯರುಗಳಿಗೆ ಬೆಳಗಾವಿ ಮಹಾನಗರಪಾಲಿಕೆ ಯನ್ನು ವಿಸರ್ಜಿಸುವ ಬಗ್ಗೆ ಸರ್ಕಾರವು ಹೊರಡಿಸಿರುವ ದಿನಾಂಕ 15/12/2011ರ ಕಾರಣ ಕೇಳುವ ನೋಟಿಸಿಗೆ ತಮ್ಮ ಹೇಳಿಕೆ/ಅಹವಾಲನ್ನು ಖುದ್ದಾಗಿ ಸಲ್ಲಿಸಲು ಅವಕಾಶ ನೀಡಿದ್ದು ಆ ಉದ್ದೇಶಕ್ಕಾಗಿ ದಿನಾಂಕ 25/06/2012ರಂದು ಬೆಳಿಗ್ಗೆ 11.00 ಗಂಟೆಗೆ ಬೆಳಗಾವಿ ಜಿಲ್ಲಾ ಪಂಚಾಯಿತಿಯ ಸಭಾಂಗಣದಲ್ಲಿ ಸಮಯ ನಿಗಧಿಪಡಿಸಿತ್ತು.

9) ಮಾನ್ಯ ಉಚ್ಚ ನ್ಯಾಯಾಲಯದ ನಿರ್ದೇಶನದಂತೆ ದಿನಾಂಕ 25/06/2012ರಂದು ಬೆಳಗಾವಿ ಜಿಲ್ಲಾ ಪಂಚಾಯಿತಿಯ ಸಭಾಂಗಣದಲ್ಲಿ ಬೆಳಗಾವಿ ಮಹಾನಗರಪಾಲಿಕೆಯ ಒಟ್ಟು 58 ಸದಸ್ಯರ ಪೈಕಿ ಮಹಾಪೌರರೂ ಸೇರಿದಂತೆ 55 ಸದಸ್ಯರುಗಳು ಹಾಜರಿದ್ದು, ಸರ್ಕಾರಕ್ಕೆ ತಮ್ಮ ಅಹವಾಲುಗಳನ್ನು ಮೌಖಿಕವಾಗಿ ಮತ್ತು ಲಿಖಿತವಾಗಿ ಸಲ್ಲಿಸಿರುತ್ತಾರೆ.

10) ಮೇಲೆ (14)ರಲ್ಲಿ ಓದಲಾದ ಬೆಳಗಾವಿ ಮಹಾನಗರಪಾಲಿಕೆಯ ಮಹಾಪೌರರು ಮತ್ತು ಸದಸ್ಯರುಗಳು ದಿನಾಂಕ 25/06/2012ರಂದು ಸಲ್ಲಿಸಿದ ಲಿಖಿತ / ಮೌಖಿಕ ಹೇಳಿಕೆಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಅವುಗಳಲ್ಲಿ ಈ ಹಿಂದೆ ಸರ್ಕಾರದ ದಿನಾಂಕ 24/11/2011ರ ಕಾರಣ ಕೇಳುವ ನೋಟಿಸಿಗೆ ಬೆಳಗಾವಿ ಮಹಾನಗರಪಾಲಿಕೆಯ ಮಾನ್ಯ ಮಹಾಪೌರರು ದಿನಾಂಕ 7/12/2011ರಂದು ಸಲ್ಲಿಸಿದ್ದ ವಿವರಣೆ ಪತ್ರದಲ್ಲಿನ ಅಂಶಗಳನ್ನೇ ಪುನಃ ನಿವೇದಿಸಿಕೊಂಡಿರುವುದು ವ್ಯಕ್ತವಾಗುತ್ತದೆ.

11) ಕಾರಣ ಕೇಳುವ ಸೂಚನಾ ಪತ್ರ, ಅದಕ್ಕೆ ಬೆಳಗಾವಿ ಮಹಾನಗರಪಾಲಿಕೆಯ ಪರವಾಗಿ ಮಹಾಪೌರರು ಸರ್ಕಾರಕ್ಕೆ ಸಲ್ಲಿಸಿರುವ ಮೇಲೆ (11)ರಲ್ಲಿ ಓದಲಾದ ದಿನಾಂಕ 7/12/2011ರ ವಿವರಣೆ ಪತ್ರದಲ್ಲಿ ಮತ್ತು ದಿನಾಂಕ 25/06/2012ರಂದು ಬೆಳಗಾವಿ ಜಿಲ್ಲಾ ಪಂಚಾಯಿತಿ ಸಭಾಂಗಣದಲ್ಲಿ

ಬೆಳಗಾವಿ ಮಹಾನಗರಪಾಲಿಕೆಯ ಮಹಾಪೌರರು ಸೇರಿದಂತೆ 55 ಸದಸ್ಯರುಗಳು ಸರ್ಕಾರಕ್ಕೆ ಸಲ್ಲಿಸಿರುವ ಲಿಖಿತ/ಮೌಖಿಕ ಉತ್ತರಗಳನ್ನು ಹಾಗೂ ನೋಟೀಸನ್ನು ಹಿಂದಕ್ಕೆ ತೆಗೆದುಕೊಳ್ಳಲು ಮತ್ತು ಅದರ ಮೇಲೆ ಮುಂದಿನ ನಡವಳಿಗಳನ್ನು ಕೈಬಿಡಲು ನೀಡಿರುವ ಕಾರಣಗಳನ್ನು ಪರಿಶೀಲಿಸಿದಾಗ ಪ್ರಸಕ್ತ ಬೆಳಗಾವಿ ಮಹಾನಗರಪಾಲಿಕೆಯು ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976 ಮತ್ತು ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನ ಮೇರೆಗೆ ಮಹಾನಗರಪಾಲಿಕೆ ಮೇಲೆ ವಿಧಿಸಿದ ಕರ್ತವ್ಯಗಳನ್ನು ಮಹಾನಗರಪಾಲಿಕೆಯು ನೆರವೇರಿಸಲು ವಿಫಲವಾಗಿದೆ, ಅಧಿಕಾರಗಳನ್ನು ಮೀರಿರುತ್ತದೆ ಮತ್ತು ಮಹಾನಗರಪಾಲಿಕೆಯ ಹಿತಾಸಕ್ತಿಗೆ ಬಾಧಕವಾಗುವ ರೀತಿಯಲ್ಲಿ ಕೆಲಸಮಾಡುತ್ತಿದೆ ಎಂದು ಈ ಕೆಳಕಂಡ ಕಾರಣಗಳಿಂದ ದೃಢಪಡುತ್ತದೆ.

ಅ) ಬೆಳಗಾವಿ ಮಹಾನಗರಪಾಲಿಕೆಯು ತನ್ನ ಸಭೆಗಳನ್ನು ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಅನುಚ್ಛೇದ–1ರಲ್ಲಿನ ಕರ್ನಾಟಕ ಪೌರನಿಗಮಗಳು (ಮಹಾನಗರಪಾಲಿಕೆ ಮತ್ತು ಸ್ಥಾಯಿ ಸಮಿತಿಗಳ ಕಾರ್ಯನಿರ್ವಹಣಾ ಪದ್ಧತಿ) ನಿಯಮಗಳು, 1998ರ ನಿಯಮ 101ರ ಪ್ರಕಾರ ಇರುವ ಅಗತ್ಯ ಸಂಖ್ಯೆಗಿಂತ ಬಹಳ ಕಡಿಮೆ ಸಂಖ್ಯೆಯಲ್ಲಿ ನಡೆಸಿರುತ್ತದೆ. ಹಾಗೂ ಬೆಳಗಾವಿ ಮಹಾನಗರಪಾಲಿಕೆಯ ಸದಸ್ಯರುಗಳು ತಮ್ಮ ಉತ್ತರದಲ್ಲಿ ಸಾಮಾನ್ಯ ಸಭೆಯ 38 ಸಭೆಗಳನ್ನು ನಡೆಸಿರುವುದಾಗಿ ತಿಳಿಸಿರುವುದು ಸರಿಯಲ್ಲ. ವಾಸ್ತವವಾಗಿ ದಾಖಲಾತಿಗಳ ಪ್ರಕಾರ ಸಾಮಾನ್ಯ ಸಭೆಯು 44 ಸಭೆಗಳಿಗೆ ಬದಲಾಗಿ ಒಟ್ಟಾರೆ 18 ಸಭೆಗಳನ್ನು ಮಾತ್ರ ನಡೆಸಿರುವುದು ದೃಢಪಟ್ಟಿರುತ್ತದೆ. ಹಾಗೂ ಮಹಾನಗರಪಾಲಿಕೆಯ ಸ್ಥಾಯಿ ಸಮಿತಿಯ 640 ಸಭೆಗಳಿಗೆ ಬದಲಾಗಿ 68 ಸಭೆಗಳನ್ನು ಮಾತ್ರ ನಡೆಸಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ.

ಆ) ಬೆಳಗಾವಿ ಮಹಾನಗರಪಾಲಿಕೆಯು ತನ್ನ ಉತ್ತರದಲ್ಲಿ ಮಹಾನಗರಪಾಲಿಕೆಯಲ್ಲಿ ಮಂಜೂರಾದ ಹುದ್ದೆಗಳಲ್ಲಿ ಕೆಲವು ಖಾಲಿ ಇರುವುದನ್ನು ಉಲ್ಲೇಖಿಸಿ ಸಿಬ್ಬಂದಿ ಕೊರತೆ ಇರುವುದರಿಂದಾಗಿ ಕಡಿಮೆ ಸಂಖ್ಯೆಯಲ್ಲಿ ಸಭೆಗಳನ್ನು ನಡೆಸಿರುವುದಾಗಿ ತಿಳಿಸಿರುತ್ತಾರೆ. ಆದರೆ, ಈ ಹಿಂದೆ ಬೆಳಗಾವಿ ಮಹಾನಗರಪಾಲಿಕೆಯ ಪರಿಷತ್ ಕಾರ್ಯದರ್ಶಿಯವರು ಪರಿಷತ್ ಸಭೆ ಕರೆಯಲು ಮತ್ತು ಸಭೆಯ ದಿನಾಂಕವನ್ನು ಗೊತ್ತುಪಡಿಸಲು ಮಹಾಪೌರರಿಗೆ ಟಿಪ್ಪಣಿ ಮಂಡಿಸಿದ್ದರೂ ಸಹ ಮಹಾಪೌರರು ಸಭೆ ನಡೆಸಲು ಅನುಮೋದನೆ ನೀಡದಿರುವುದರಿಂದ ಬಹಳಷ್ಟು ವಿಷಯಗಳು ಬಾಕಿ ಇರುವುದು ಕಂಡು ಬಂದಿರುತ್ತದೆ. ಆದುದರಿಂದ ಕಡಿಮೆ ಸಿಬ್ಬಂದಿ ಇರುವ ಕಾರಣ ನೀಡಿ ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಅನುಚ್ಛೇದ–1ರಲ್ಲಿನ ಕರ್ನಾಟಕ ಪೌರನಿಗಮಗಳು (ಮಹಾನಗರಪಾಲಿಕೆ ಮತ್ತು ಸ್ಥಾಯಿ ಸಮಿತಿಗಳ ಕಾರ್ಯನಿರ್ವಹಣಾ ಪದ್ಧತಿ) ನಿಯಮಗಳು, 1998ರ ಪ್ರಕಾರ ನಿಗಧಿತವಾಗಿ ನಡೆಸಲೇಬೇಕಾದ ಸಾಮಾನ್ಯ ಸಭೆ ಮತ್ತು ಸ್ಥಾಯಿ ಸಮಿತಿಗಳ ಸಭೆಗಳನ್ನು ನಡೆಸದಿರುವುದನ್ನು ಒಪ್ಪಲಾಗುವುದಿಲ್ಲ. ಇದರಿಂದಾಗಿ, ಸಿಬ್ಬಂದಿ ಕೊರತೆಯ ಅಂಶವು ಕಡಿಮೆ ಸಂಖ್ಯೆಯಲ್ಲಿ ಸಭೆಗಳನ್ನು ನಡೆಸಲು ಕಾರಣವಾಗಿದೆ ಎಂದು ಬೆಳಗಾವಿ ಮಹಾನಗರಪಾಲಿಕೆಯ ಉತ್ತರದಲ್ಲಿ ಹೇಳಿರುವುದನ್ನು ಒಪ್ಪಲಾಗುವುದಿಲ್ಲ.

ಇ) ಮಹಾನಗರಪಾಲಿಕೆಯ ಪರವಾಗಿ ಸಲ್ಲಿಸಿರುವ ಉತ್ತರದಲ್ಲಿ ಮಹಾನಗರಪಾಲಿಕೆಗೆ ಪೂರ್ಣಾವಧಿ ಪರಿಷತ್ ಕಾರ್ಯದರ್ಶಿ ಇವರುವುದಿಲ್ಲ ಮತ್ತು ಕೇವಲ ಐದು ಜನ ಸಿಬ್ಬಂದಿ ಇರುತ್ತಾರೆ ಮತ್ತು ಕಾನೂನಿನಂತೆ ಕೆ.ಎ.ಎಸ್. ಅಧಿಕಾರಿ ನೇಮಕಗೊಂಡಿಲ್ಲದಿರುವುದು ಲೋಪಗಳಿಗೆ ಕಾರಣವಾಗುತ್ತಿದೆ ಎಂದು ತಿಳಿಸಿರುವುದು ಸರಿಯಲ್ಲ. ಏಕೆಂದರೆ ಯಾವುದೇ ಹುದ್ದೆ ಖಾಲಿ ಇದ್ದಲ್ಲಿ ಆ ಹುದ್ದೆಗೆ ಸಂಬಂಧಪಟ್ಟ ಕರ್ತವ್ಯಗಳನ್ನು ಮತ್ತೊಬ್ಬ ಅಧಿಕಾರಿಯ ಮೂಲಕ ನಿರ್ವಹಿಸುವುದು ಆಡಳಿತ ವ್ಯವಸ್ಥೆಯಲ್ಲಿ ಸಾಮಾನ್ಯ ಪ್ರಕ್ರಿಯೆಯಾಗಿರುತ್ತದೆ ಮತ್ತು ಆ ರೀತಿ ನಿರ್ವಹಿಸಿರುತ್ತಾರೆ. ಈ ರೀತಿ ಪ್ರಭಾರ ವ್ಯವಸ್ಥೆ ಬೆಳಗಾವಿ ಮಹಾನಗರಪಾಲಿಕೆಗೆ ಮಾತ್ರ ಸೀಮಿತವಾಗಿರುವುದಿಲ್ಲ. ಇದರಿಂದಾಗಿ ಕಡಿಮೆ ಸಿಬ್ಬಂದಿ ಇರುವ ಕಾರಣ ನೀಡಿ ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಅನುಚ್ಛೇದ–1ರ ಕರ್ನಾಟಕ ಪೌರನಿಗಮಗಳು (ಮಹಾನಗರಪಾಲಿಕೆ ಮತ್ತು ಸ್ಥಾಯಿ ಸಮಿತಿಗಳ ಕಾರ್ಯನಿರ್ವಹಣಾ ಪದ್ಧತಿ) ನಿಯಮಗಳು, 1998ರ ಪ್ರಕಾರ ನಿಗಧಿತವಾಗಿ ನಡೆಸಲೇಬೇಕಾದ ಸಾಮಾನ್ಯ ಸಭೆ ಮತ್ತು ಸ್ಥಾಯಿ ಸಮಿತಿಗಳ ಸಭೆಗಳನ್ನು ನಡೆಸದಿರುವುದನ್ನು ಒಪ್ಪಲಾಗುವುದಿಲ್ಲ.

ಈ) ಈ ಬಗ್ಗೆ ಈ ಹಿಂದೆಯೇ ಬೆಳಗಾವಿ ಮಹಾನಗರಪಾಲಿಕೆಯ ಮಹಾಪೌರರು ತಮ್ಮ ದಿನಾಂಕ 23/11/2010ರ ಪತ್ರದಲ್ಲಿ ನೀಡಿದ ವಿವರಣೆಯಲ್ಲಿ ಪರಿಷತ್ ಸಭೆ ನಡೆಸುವಲ್ಲಿ ಆದ ವಿಳಂಬವು ಅನಿವಾರ್ಯ ಕಾರಣಗಳಿಂದ ಆಗಿದ್ದು ಇನ್ನು ಮುಂದೆ ಪರಿಷತ್ ಸಭೆಯನ್ನು ಹಾಗೂ ಸ್ಥಾಯಿ ಸಮಿತಿಗಳ ಸಭೆಯನ್ನು ನಿಯಮಿತವಾಗಿ ನಡೆಸಲಾಗುವುದು ಎಂದು ವಿವರಣೆ ಸಲ್ಲಿಸಿರುತ್ತಾರೆ. ಆದರೆ, ನಂತರವೂ ಸಹ ನಿಯಮಬದ್ಧವಾಗಿ ಮಹಾನಗರಪಾಲಿಕೆ ಸಭೆಗಳನ್ನು ನಡೆಸುವಲ್ಲಿ ಯಾವುದೇ ಸುಧಾರಣೆ ಕಂಡು ಬಂದಿಲ್ಲದಿರುವುದರಿಂದ ಮತ್ತು ಈ ಬಗ್ಗೆ ಅವರ ವಿವರಣೆ ಸೂಕ್ತವಾಗಿಲ್ಲದಿರುವುದರಿಂದ ಬೆಳಗಾವಿ ಮಹಾನಗರಪಾಲಿಕೆಯು ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಅನ್ವಯ ತನ್ನ ಕರ್ತವ್ಯಗಳನ್ನು ನಿರ್ವಹಿಸುವುದರಲ್ಲಿ ವಿಫಲವಾಗಿದೆ ಎಂಬುದು ಸ್ಪಷ್ಟವಾಗುತ್ತದೆ.

ಉ) ಬೆಳಗಾವಿ ಮಹಾನಗರಪಾಲಿಕೆಗೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಹಲವಾರು ಯೋಜನೆಗಳ ಅಡಿ ಅನುದಾನ ಒದಗಿಸಲಾಗುತ್ತಿದೆ. ಈ ರೀತಿ ಒದಗಿಸಲಾದ ಅನುದಾನವನ್ನು ಸಮರ್ಪಕವಾಗಿ ಮತ್ತು ಪೂರ್ಣವಾಗಿ ಉಪಯೋಗಿಸಿಕೊಳ್ಳುವಲ್ಲಿ ಬೆಳಗಾವಿ

ಮಹಾನಗರಪಾಲಿಕೆಯು ವಿಫಲವಾಗಿರುವುದು ಮತ್ತು ಅದರಿಂದಾಗಿ ಸಾರ್ವಜನಿಕರು, ಅದರಲ್ಲೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ಸರ್ಕಾರದ ಸೌಲಭ್ಯಗಳಿಂದ ವಂಚಿತರಾಗಿರುವುದು ಕಂಡು ಬಂದಿರುತ್ತದೆ. ಬೆಳಗಾವಿ ಮಹಾನಗರಪಾಲಿಕೆಯು ಸರ್ಕಾರಕ್ಕೆ ಸಲ್ಲಿಸಿರುವ ತಮ್ಮ ಉತ್ತರದಲ್ಲಿ ಬೇರೆ ಯೋಜನೆಗಳಲ್ಲಿ ಸಾಧನೆ ಆಗಿದೆ ಎಂದೂ, ಎಸ್.ಎಫ್.ಸಿ ಅನುದಾನ ಶೇಕಡ 22.75ರ ಯೋಜನೆಯಲ್ಲಿ ಸರ್ಕಾರದ ಮಾರ್ಗಸೂಚಿ ಅನ್ವಯ ಫಲಾನುಭವಿಗಳು ಲಭ್ಯವಾಗದೆ ಇರುವುದರಿಂದ ಅನುದಾನ ಪೂರ್ಣ ಬಳಕೆಯಾಗಿರುವುದಿಲ್ಲವೆಂದು ತಿಳಿಸಿದೆ. ಈ ಸಂಬಂಧ ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರು ತಮ್ಮ ದಿನಾಂಕ 18/7/2011ರ ಪತ್ರದಲ್ಲಿ ನಿಯಮಬದ್ಧವಾಗಿ ಬೆಳಗಾವಿ ಮಹಾನಗರಪಾಲಿಕೆಯ ಸಾಮಾನ್ಯ ಸಭೆ ಮತ್ತು ಸ್ಥಾಯಿ ಸಮಿತಿಗಳ ಸಭೆಗಳನ್ನು ನಡೆಸದಿರುವುದರಿಂದ ಬೆಳಗಾವಿ ಮಹಾನಗರಪಾಲಿಕೆ ವ್ಯಾಪ್ತಿಯಲ್ಲಿ ವಿವಿಧ ಯೋಜನೆಗಳ ಅನುಷ್ಠಾನಗೊಳಿಸುವಲ್ಲಿ ವಿಳಂಬವಾಗಿರುತ್ತದೆ ಮತ್ತು ಸಾರ್ವಜನಿಕರು ಸರ್ಕಾರದ ಯೋಜನೆಗಳ ಸೌಲಭ್ಯಗಳಿಂದ ವಂಚಿತರಾಗಿರುತ್ತಾರೆ ಎಂದು ವಿವರಗಳೊಂದಿಗೆ ವರದಿ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಬೆಳಗಾವಿ ಮಹಾನಗರಪಾಲಿಕೆಗೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಹಲವಾರು ಯೋಜನೆಗಳ ಅಡಿ ಒದಗಿಸಲಾದ ಅನುದಾನವನ್ನು ಸಮರ್ಪಕವಾಗಿ ಮತ್ತು ಪೂರ್ಣವಾಗಿ ಉಪಯೋಗಿಸಿಕೊಳ್ಳುವಲ್ಲಿ ಬೆಳಗಾವಿ ಮಹಾನಗರಪಾಲಿಕೆಯು ವಿಫಲವಾಗಿದೆ ಎಂಬ ಆರೋಪವನ್ನು ಬೆಳಗಾವಿ ಮಹಾನಗರಪಾಲಿಕೆ ಪರವಾಗಿ ಸಲ್ಲಿಸಿರುವ ಹೇಳಿಕೆಯಲ್ಲಿ ನಿರಾಕರಿಸಿರುವುದನ್ನು ಒಪ್ಪಲಾಗುವುದಿಲ್ಲ.

ಊ) ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಕಲಂ 170ರ ಪ್ರಕಾರ ಮಹಾನಗರಪಾಲಿಕೆಯು ಆರ್ಥಿಕ ವರ್ಷ ಪ್ರಾರಂಭಕ್ಕೆ ಕನಿಷ್ಠ 3 ವಾರಗಳ ಅವಧಿಗಿಂತ ಮುಂಚಿತವಾಗಿ ಆಯ-ವ್ಯಯ ಅಂದಾಜು ಪತ್ರಕ್ಕೆ ಅನುಮೋದನೆ ನೀಡಿ ಸರ್ಕಾರಕ್ಕೆ ಸಲ್ಲಿಸಬೇಕಾಗಿರುತ್ತದೆ. ಆದರೆ ಬೆಳಗಾವಿ ಮಹಾನಗರಪಾಲಿಕೆಯು 2011-12ನೇ ಸಾಲಿನ ಆಯ-ವ್ಯಯ ಅಂದಾಜನ್ನು ಆರ್ಥಿಕ ವರ್ಷ ಪ್ರಾರಂಭವಾದ ನಂತರ ದಿನಾಂಕ 28/6/2011ರಂದು ಅನುಮೋದನೆ ನೀಡಿರುತ್ತದೆ ಮತ್ತು ದಿನಾಂಕ 26/7/2011ರಂದು ಸರ್ಕಾರಕ್ಕೆ ಕಳುಹಿಸಿರುತ್ತಾರೆ. ಈ ಮೂಲಕ ಬೆಳಗಾವಿ ಮಹಾನಗರಪಾಲಿಕೆಯು ಅಧಿನಿಯಮದ ಉಲ್ಲಂಘನೆ ಮಾಡಿರುತ್ತದೆ. ಇದರಿಂದಾಗಿ ಆಯವ್ಯಯದ ಅನುಸಾರ ಮಹಾನಗರಪಾಲಕೆಯಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಸಕಾಲದಲ್ಲಿ ಕೈಗೊಳ್ಳಲು ಸಾಧ್ಯವಾಗದೆ ಪ್ರಗತಿ ಕುಂಠಿತವಾಗಿರುತ್ತದೆ. ಈ ಸಂಬಂಧ ಉತ್ತರದಲ್ಲಿ ಮಹಾನಗರಪಾಲಿಕೆಯ ಆಯವ್ಯಯವನ್ನು ನಿಗಧಿತ ಕಾಲಮಿತಿಯಲ್ಲಿ ಅನುಮೋದನೆ ಮಾಡದಿರಲು ಅದಕ್ಕೆ ಸೂಕ್ತ ಪ್ರಸ್ತಾವನೆಯನ್ನು ಆಯುಕ್ತರು ವಿಳಂಬವಾಗಿ ಮಂಡಿಸಿರುವುದು ಕಾರಣವಾಗಿರುತ್ತದೆಂದು, ನಿಯಮಗಳಂತೆ ಜನವರಿ 15ರೊಳಗಾಗಿ ಸಲ್ಲಿಸಬೇಕಾಗಿದ್ದರೂ ಸಹ ಆಯುಕ್ತರು ಆ ರೀತಿ ಮಾಡಿರುವುದಿಲ್ಲವೆಂದು, ಇದರಿಂದಾಗಿ ಈ ವಿಳಂಬವೂ ಉದ್ದೇಶಪೂರ್ವಕವಾಗಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಆದರೆ ದಾಖಲಾತಿಗಳ ಪರಿಶೀಲನೆಯಿಂದ ಬೆಳಗಾವಿ ಮಹಾನಗರಪಾಲಿಕೆಯ 2011-12ನೇ ಸಾಲಿನ ಆಯವ್ಯಯ ಪತ್ರಿಕೆ ಮತ್ತು 2010-11ನೇ ಸಾಲಿನ ಪರಿಷ್ಕೃತ ಆಯವ್ಯಯ ಪತ್ರಿಕೆಯನ್ನು ಪರಿಷತ್ತಿನ ಸ್ಥಾಯಿ ಸಮಿತಿಯ ಪರಾಮರ್ಶೆಗೆ ಹಾಗೂ ಅನುಮೋದನೆಗೆ ಜನವರಿ 2011ರಲ್ಲಿಯೇ ಆಯುಕ್ತರು, ಬೆಳಗಾವಿ ಮಹಾನಗರಪಾಲಿಕೆ ಇವರು ಮಂಡಿಸಿರುವುದು ಕಂಡುಬರುತ್ತದೆ. ನಂತರವೂ ಸಹ ಬೆಳಗಾವಿ ಮಹಾನಗರಪಾಲಿಕೆಯು ಆಯವ್ಯಯ ಅಂದಾಜನ್ನು ಅನುಮೋದಿಸಿ ಸರ್ಕಾರಕ್ಕೆ ಕಳುಹಿಸಲು ಮೂರು ತಿಂಗಳು ಸಕಾರಣವಿಲ್ಲದೆ ವಿಳಂಬ ಮಾಡಿರುತ್ತದೆ ಮತ್ತು ಇದರಿಂದಾಗಿ ಮಹಾನಗರಪಾಲಿಕೆಯಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಜಾರಿಗೊಳಿಸಲು ವಿಳಂಬವಾಗಿರುವುದು ವ್ಯಕ್ತವಾಗುತ್ತದೆ. ಇದರಿಂದಾಗಿ, ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಕಲಂ 170ರ ಪ್ರಕಾರ ಮಹಾನಗರಪಾಲಿಕೆಯು ಆರ್ಥಿಕ ವರ್ಷ ಪ್ರಾರಂಭಕ್ಕೆ ಕನಿಷ್ಠ 3 ವಾರಗಳ ಅವಧಿಗಿಂತ ಮುಂಚಿತವಾಗಿ ಆಯ-ವ್ಯಯ ಅಂದಾಜು ಪತ್ರಕ್ಕೆ ಅನುಮೋದನೆ ನೀಡಿ ಸರ್ಕಾರಕ್ಕೆ ಸಲ್ಲಿಸಲು ವಿಫಲವಾಗಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

ಋ) ಬೆಳಗಾವಿ ಮಹಾನಗರಪಾಲಿಕೆಯಲ್ಲಿ ಕಂಡು ಬಂದ ನ್ಯೂನತೆಗಳನ್ನು ಸರಿಪಡಿಸಿಕೊಳ್ಳುವಂತೆ ಡಿಸೆಂಬರ್ 2009ರಿಂದಲೂ ಸರ್ಕಾರದಿಂದ ಕಾಲಕಾಲಕ್ಕೆ ಸೂಚನೆಗಳನ್ನು ನೀಡಲಾಗಿದೆ. ಆದರೂ ಸಹ ಬೆಳಗಾವಿ ಮಹಾನಗರಪಾಲಿಕೆಯು ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರಂತೆ ತನ್ನ ಆದ್ಯಕರ್ತವ್ಯಗಳನ್ನು ನಿರ್ವಹಿಸಲು ವಿಫಲವಾಗಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

ಎ) ಕೆಲವು ಸದಸ್ಯರು ಮಾಡಿದ ತಪ್ಪು ಹಾಗೂ ನಡೆದುಕೊಂಡ ರೀತಿಯಿಂದ ಅವರ ಮೇಲೆ ಕ್ರಮ ಕೈಗೊಳ್ಳುವುದನ್ನು ಬಿಟ್ಟು ಇಡೀ ಪಾಲಿಕೆಯನ್ನು ಸೂಪರ್ ಸೀಡ್ ಮಾಡುವ ಅಗತ್ಯವಿಲ್ಲವೆಂದು, ಆದುದರಿಂದ ಬೆಳಗಾವಿ ಮಹಾನಗರಪಾಲಿಕೆಯ ಉಳಿದ ಅವಧಿಯನ್ನು ಪೂರ್ಣಗೊಳಿಸಲು ಅವಕಾಶ ಮಾಡಿಕೊಡಬೇಕು ಎಂಬ ಕೆಲವು ಸದಸ್ಯರ ಕೋರಿಕೆಯನ್ನು ಪರಿಶೀಲಿಸಲಾಗಿ, ಡಾ. ಚಂದ್ರಶೇಖರ ಕಂಬಾರರವರಿಗೆ ಜ್ಞಾನಪೀಠ ಪ್ರಶಸ್ತಿ ನೀಡಿರುವ ವಿಷಯವನ್ನು ಬೆಳಗಾವಿ ಮಹಾನಗರಪಾಲಿಕೆಯಲ್ಲಿ ದಿನಾಂಕ 29/9/2011ರಂದು ನಡೆದ ಸಾಮಾನ್ಯ ಸಭೆಯಲ್ಲಿ ಚರ್ಚಿಸಿ ಜ್ಞಾನಪೀಠ ಪ್ರಶಸ್ತಿಗೆ ಆಯ್ಕೆಯಾಗಿದ್ದಕ್ಕಾಗಿ ಡಾ. ಚಂದ್ರಶೇಖರ ಕಂಬಾರ ರವರಿಗೆ ಅಭಿನಂದನಾ ನಡವಳಿಯನ್ನು ಅಂಗೀಕರಿಸಲು ಪ್ರಯತ್ನಿಸಿದಾಗ ಶ್ರೀ ಸಂಭಾಜಿ ಬಂಡು ಚವ್ಹಾಣ, ಸದಸ್ಯರು, ಬೆಳಗಾವಿ ಮಹಾನಗರಪಾಲಿಕೆ ಮತ್ತು

ಇತರರು ಸದರಿ ಅಭಿನಂದನಾ ನಡವಳಿಯನ್ನು ವಿರೋಧಿಸಿರುತ್ತಾರೆ ಮತ್ತು ಈ ಬಗ್ಗೆ ಸದರಿ ಸಭೆಯ ನಡವಳಿಯಲ್ಲಿ ದಾಖಲಾಗಿರುತ್ತದೆ. ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಅನುಚ್ಛೇಧ-1ರ ಮಹಾನಗರಪಾಲಿಕೆ ಮತ್ತು ಸ್ಥಾಯಿ ಸಮಿತಿಗಳ ಕಾರ್ಯನಿರ್ವಹಣಾ ನಿಯಮಗಳು, 1998ರ ನಿಯಮ 17 ಮತ್ತು 18ರ ಪ್ರಕಾರ ಅಭಿನಂದನಾ ನಡವಳಿಗಳನ್ನು ಅಂಗೀಕರಿಸಬಹುದಾಗಿರುತ್ತದೆ. ಹಾಗೂ ಸದರಿ ನಿಯಮಗಳ ನಿಯಮ 89ರ ಪ್ರಕಾರ ಕಾರ್ಯಕಲಾಪಗಳಿಗೆ ಅಡ್ಡಿಪಡಿಸುವ ಯಾವುದೇ ಸದಸ್ಯರನ್ನು ಅಮಾನತ್ತಿನಲ್ಲಿಡಬಹುದಾಗಿರುತ್ತದೆ. ಅದರಂತೆ ಮಹಾಪೌರರು ಕ್ರಮ ಕೈಗೊಂಡು ಅಡ್ಡಿಪಡಿಸಿದ ಸದಸ್ಯರುಗಳನ್ನು ಪ್ರಸ್ತುತ ಮಹಾನಗರಪಾಲಿಕೆಯ ಉಳಿದ ಅವಧಿಗೆ ಅಮಾನತ್ತಿನಲ್ಲಿಡುವುದೂ ಸೇರಿದಂತೆ ಶಿಸ್ತು ಕ್ರಮ ಕೈಗೊಳ್ಳಬೇಕಾಗಿತ್ತು. ಇದರಿಂದಾಗಿ ಮಹಾಪೌರರು ನಿಯಮಾನುಸಾರ ಕ್ರಮ ಕೈಗೊಳ್ಳದಿರುವುದು ಮತ್ತು ಬೆಳಗಾವಿ ಮಹಾನಗರಪಾಲಿಕೆಯು ನಿಯಮಾನುಸಾರ ಕಾರ್ಯನಿರ್ವಹಣೆ ಮಾಡದಿರುವುದು ಕಂಡು ಬರುತ್ತದೆ.

ಏ) ಕಾರಣ ಕೇಳುವ ನೋಟಿಸಿನ 2ರಿಂದ 10ರವರೆಗಿನ ಕಂಡಿಕೆಗಳಲ್ಲಿ ತಿಳಿಸಿರುವ ಆರೋಪಗಳಿಗೆ 2008ರಿಂದ 2011ರವರೆಗೆ ಬಹಳಷ್ಟು ಅವಧಿಯು ಚುನಾವಣಾ ನೀತಿ ಸಂಹಿತೆಯಿಂದಾಗಿ, ಎಂ.ಎಲ್.ಸಿ. ಚುನಾವಣೆಯಿಂದಾಗಿ, ಮಹಾಪೌರರು & ಉಪ ಮಹಾಪೌರರ ಚುನಾವಣೆ, ಲೋಕಸಭಾ ಚುನಾವಣೆ, ವಾರ್ಡ್ 31ರ ಉಪ ಚುನಾವಣೆಗಳು ಕಾರಣವಾಗಿರುತ್ತವೆ. ಇದರಿಂದಾಗಿ ನಿಗಧಿತವಾಗಿ ಸಭೆಗಳನ್ನು ನಡೆಸಲು ಸಾಧ್ಯವಾಗಿರುವುದಿಲ್ಲ ಎಂಬ ಉತ್ತರವನ್ನು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ವಿವರಣೆಯಲ್ಲಿ ನೀಡಿರುವ ಕಾರಣಗಳು ಸಾಮಾನ್ಯವಾಗಿ ಕಂಡುಬರುವ ಪ್ರಜಾಸತ್ತಾತ್ಮಕ ಮತ್ತು ಆಡಳಿತಾತ್ಮಕ ಪ್ರಕ್ರಿಯೆಗಳಾಗಿರುತ್ತವೆ. ಇವುಗಳಿಂದಾಗಿ ನಿಗಧಿತ ಕಾರ್ಯಚಟುವಟಿಕೆಗಳು ಕುಂಠಿತಗೊಂಡಿವೆ ಎಂಬ ಕಾರಣವನ್ನು ನೀಡಿ ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಅನುಚ್ಛೇದ-1ರ ಕರ್ನಾಟಕ ಪೌರನಿಗಮಗಳು (ಮಹಾನಗರಪಾಲಿಕೆ ಮತ್ತು ಸ್ಥಾಯಿ ಸಮಿತಿಗಳ ಕಾರ್ಯನಿರ್ವಹಣಾ ಪದ್ಧತಿ) ನಿಯಮಗಳು, 1998ರ ಪ್ರಕಾರ ನಡೆಸಲೇಬೇಕಾದ ಸಾಮಾನ್ಯ ಸಭೆ ಮತ್ತು ಸ್ಥಾಯಿ ಸಮಿತಿಗಳ ಸಭೆಗಳನ್ನು ನಡೆಸದಿರುವುದನ್ನು ಒಪ್ಪಲಾಗುವುದಿಲ್ಲ.

12) ಉಳಿದಂತೆ, ಮಹಾನಗರಪಾಲಿಕೆಯ ಪರವಾಗಿ ಸಲ್ಲಿಸಿರುವ ಉತ್ತರಗಳಲ್ಲಿ ಬಹಳಷ್ಟು ಅಂಶಗಳು ಸರ್ಕಾರದ ಕಾರಣ ಕೇಳುವ ನೋಟಿಸಿನಲ್ಲಿ ಮಾಡಲಾಗಿರುವ ಆರೋಪಗಳಿಗೆ ಸಂಬಂಧಪಟ್ಟಿರುವುದಿಲ್ಲ. ಹಾಗೂ ರಿಟ್ ಅರ್ಜಿ ಸಂಖ್ಯೆ: 60201, 60416, 60448-60467 ಮತ್ತು 61454/2012ರಲ್ಲಿನ ರಿಟ್ ಅರ್ಜಿದಾರರು ಸೇರಿದಂತೆ ಬೆಳಗಾವಿ ಮಹಾನಗರಪಾಲಿಕೆಯ ಮಾನ್ಯ ಮಹಾಪೌರರು ಮತ್ತು ಸದಸ್ಯರುಗಳು ದಿನಾಂಕ 25/6/2012 ರಂದು ಸಲ್ಲಿಸಿದ ಲಿಖಿತ ಮತ್ತು ಮೌಖಿಕ ಅಹವಾಲುಗಳನ್ನು ಆಲಿಸಿದ ನಂತರವೂ ಸಹ ಈ ಹಿಂದೆ ಬೆಳಗಾವಿ ಮಹಾನಗರಪಾಲಿಕೆಯನ್ನು ವಿಸರ್ಜಿಸಿ ಸರ್ಕಾರವು ತೆಗೆದುಕೊಂಡ ತೀರ್ಮಾನವನ್ನು ಬದಲಾಯಿಸಿ ಭಿನ್ನವಾದ ಯಾವುದೇ ಅಭಿಪ್ರಾಯಕ್ಕೆ ಬರಲು ಸಕಾರಣಗಳು ಇರುವುದು ಕಂಡುಬರುವುದಿಲ್ಲ.

13) ಈ ಹಿನ್ನೆಲೆಯಲ್ಲಿ ಪ್ರಸಕ್ತ ಬೆಳಗಾವಿ ಮಹಾನಗರಪಾಲಿಕೆಯ ಮೇಲೆ ಹೇಳಲಾದ ಕ್ರಮಗಳು ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಮೂಲಕ ಮತ್ತು ಮೇರೆಗೆ ಅದಕ್ಕೆ ಪ್ರದತ್ತವಾದಂತಹ ಅಧಿಕಾರಗಳನ್ನು ಚಲಾಯಿಸುವುದು, ಅಂತಹ ಪ್ರಕಾರ್ಯಗಳನ್ನು ನಿರ್ವಹಿಸುವುದು ಮತ್ತು ಅಂತಹ ಕರ್ತವ್ಯಗಳನ್ನು ಸಮರ್ಪಕವಾಗಿ ನಿರ್ವಹಿಸುತ್ತಿರುವುದು ಕಂಡುಬಂದಿಲ್ಲವಾದ್ದರಿಂದ ಈ ಮೇಲಿನ ಕಂಡಿಕೆಗಳಲ್ಲಿ ಹೇಳಲಾದ ಕಾರಣಗಳಿಗಾಗಿ ಬೆಳಗಾವಿ ಮಹಾನಗರಪಾಲಿಕೆಯು ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಮೇರೆಗೆ ಮಹಾನಗರಪಾಲಿಕೆ ಮೇಲೆ ವಿಧಿಸಿದ ಮತ್ತು ಮಹಾನಗರಪಾಲಿಕೆಯು ಪಾಲನೆ ಮಾಡಲು ಒಪ್ಪಿಕೊಂಡಂತಹ ಕಾನೂನುಬದ್ಧ ಕರ್ತವ್ಯಗಳನ್ನು ಮಹಾನಗರಪಾಲಿಕೆಯು ನೆರವೇರಿಸಲು ವಿಫಲವಾಗಿದೆ ಅಥವಾ ಅಧಿಕಾರಗಳನ್ನು ಮೀರಿರುತ್ತದೆ ಅಥವಾ ಮಹಾನಗರಪಾಲಿಕೆಯ ಹಿತಾಸಕ್ತಿಗೆ ಬಾಧಕವಾಗುವ ರೀತಿಯಲ್ಲಿ ಕೆಲಸಮಾಡುತ್ತಿದೆ ಎಂಬ ತೀರ್ಮಾನಕ್ಕೆ ಸರ್ಕಾರವು ಬಂದಿರುತ್ತದೆ.

14) ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಕಲಂ 99ರಲ್ಲಿ ಯಾವುದೇ ಮಹಾನಗರಪಾಲಿಕೆಯನ್ನು ರದ್ದುಗೊಳಿಸುವ ಅಧಿಕಾರವನ್ನು ಸರ್ಕಾರಕ್ಕೆ ನೀಡಲಾಗಿದೆ.

15) ಮೇಲೆ ಹೇಳಲಾದ ಅಂಶಗಳನ್ನು ಸರ್ಕಾರವು ವಿವರವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 239 ಎಸಿಬಿ 2011, ಬೆಂಗಳೂರು, ದಿನಾಂಕ : 3ನೇ ಜುಲೈ 2012**

ಮೇಲೆ ಪ್ರಸ್ತಾವನೆಯಲ್ಲಿ ಹೇಳಲಾದ ಕಾರಣಗಳಿಗಾಗಿ ಪ್ರಸಕ್ತ ಬೆಳಗಾವಿ ಮಹಾನಗರಪಾಲಿಕೆಯ ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಮೂಲಕ ಮತ್ತು ಮೇರೆಗೆ ಅದಕ್ಕೆ ಪ್ರದತ್ತವಾದಂತಹ ಅಧಿಕಾರಗಳನ್ನು ಚಲಾಯಿಸುವುದು, ಅಂತಹ ಪ್ರಕಾರ್ಯಗಳನ್ನು ನಿರ್ವಹಿಸುವುದು ಮತ್ತು ಅಂತಹ ಕರ್ತವ್ಯಗಳನ್ನು ಸಮರ್ಪಕವಾಗಿ ನಿರ್ವಹಿಸುತ್ತಿರುವುದು ಕಂಡುಬಂದಿಲ್ಲವಾದ್ದರಿಂದ ಬೆಳಗಾವಿ ಮಹಾನಗರಪಾಲಿಕೆಯು ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಮೇರೆಗೆ ಮಹಾನಗರಪಾಲಿಕೆಯ ಮೇಲೆ ವಿಧಿಸಿದ ಕರ್ತವ್ಯಗಳನ್ನು ಮಹಾನಗರಪಾಲಿಕೆಯು ನೆರವೇರಿಸಲು

ವಿಫಲವಾಗಿದೆ ಮತ್ತು ಮಹಾನಗರಪಾಲಿಕೆಯ ಹಿತಾಸಕ್ತಿಗೆ ಬಾಧಕವಾಗುವ ರೀತಿಯಲ್ಲಿ ಕೆಲಸಮಾಡುತ್ತಿದೆ ಎಂದು ಹಾಗೂ ಸರ್ಕಾರದ ನಿರ್ದೇಶನಗಳನ್ನು ಪಾಲಿಸಲು ವಿಫಲವಾಗಿದೆಯೆಂದು ಸರ್ಕಾರವು ತೀರ್ಮಾನಕ್ಕೆ ಬಂದಿದೆ.

2) ಈ ಹಿನ್ನೆಲೆಯಲ್ಲಿ ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಕಲಂ 99(1)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ತಕ್ಷಣದಿಂದ ಜಾರಿಗೆ ಬರುವಂತೆ ಪ್ರಸಕ್ತ ಬೆಳಗಾವಿ ಮಹಾನಗರಪಾಲಿಕೆಯನ್ನು ವಿಸರ್ಜಿಸಿದೆ.

3) ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಕಲಂ 99ರ ಉಪ ಕಲಂ(2)ರ ಅನ್ವಯ ಬೆಳಗಾವಿ ಮಹಾನಗರಪಾಲಿಕೆಯ ಸದಸ್ಯರ ಸದಸ್ಯತ್ವವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸದರಿ ಕಲಂ 99ರ ಉಪ ಕಲಂ(8)ರ ಅನ್ವಯ ಪರಿಷತ್ತಿನ ಸದಸ್ಯರು ಮುಂದಿನ ಚುನಾವಣೆಗಳಲ್ಲಿ ಸ್ಪರ್ಧಿಸುವ ಅರ್ಹತೆಗೆ ಬಾಧಕವಾಗದಂತೆ ಮುಕ್ತಾಯಗೊಳಿಸಲಾಗಿದೆ.

4) ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಕಲಂ 99ರ ಉಪ ಕಲಂ(2)(ಬಿ) ಅನ್ವಯ ಬೆಳಗಾವಿ ಮಹಾನಗರಪಾಲಿಕೆಗೆ ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ಸರ್ಕಾರವು ಬೆಳಗಾವಿ ಜಿಲ್ಲೆಯ ಜಿಲ್ಲಾಧಿಕಾರಿಗಳನ್ನು ಬೆಳಗಾವಿ ಮಹಾನಗರಪಾಲಿಕೆಯ ಆಡಳಿತಾಧಿಕಾರಿಯನ್ನಾಗಿ ನೇಮಿಸಿದೆ. ಮಹಾನಗರಪಾಲಿಕೆಯ ಪರಿಷತ್ತಿನ ವಿಸರ್ಜಿತ ಅವಧಿಯಲ್ಲಿ ಮಹಾನಗರಪಾಲಿಕೆಯ ಆಡಳಿತಾಧಿಕಾರಿಗಳು ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976 ಮತ್ತು ಇತರೆ ಯಾವುದೇ ಕಾನೂನಿನಲ್ಲಿ ಮಹಾನಗರಪಾಲಿಕೆಗೆ ಮತ್ತು ಮಹಾನಗರಪಾಲಿಕೆಯ ಸ್ಥಾಯಿ ಸಮಿತಿಗಳಿಗೆ ಪ್ರದತ್ತವಾದ ಮತ್ತು ಹೊರಿಸಲಾದ ಅಧಿಕಾರಗಳನ್ನು ಮತ್ತು ಕರ್ತವ್ಯಗಳನ್ನು ನಿರ್ವಹಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಆರ್. ಮಹೇಶ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
(ಮಹಾನಗರಪಾಲಿಕೆ–2)
ನಗರಾಭಿವೃದ್ಧಿ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜುಲೈ ೩, ೨೦೧೨ (ಆಷಾಢ ೧೨, ಶಕ ವರ್ಷ ೧೯೩೪) | ನಂ. ೪೪೭ |
|---|---|---|

## PARLIAMENTARY AFFAIRS AND LEGISLATION SECRETARIAT

**NOTIFICATION**

**No. DPAL 5 SAMVYAVI 2012, Bangalore, Dated : 3rd July, 2012**

The following Order made by the Governor is hereby published for general information:-

**"ORDER**

In exercise of the powers conferred upon me by clause (1) of Article 174 of the Constitution of India, I, H.R.Bhardwaj, Governor of Karnataka, do hereby summon the Karnataka Legislative Assembly to meet at Bangalore at 11 A.M. on Monday the 16th day of July, 2012.

**GOVERNOR OF KARNATAKA"**

By order and in the name of the Governor of Karnataka,

**G.K. BOREGOWDA**
Secretary to Government
Department of Parliamentary Affairs and Legislation